KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಆಗಸ್ಟ್ ೧೦, ೨೦೦೬ (ಶ್ರಾವಣ ೧೯, ಶಕ ವರ್ಷ ೧೯೨೮) | ಸಂಚಿಕೆ ೩೨ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿ, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು**

**1894 ಭೂಸ್ವಾಧೀನ ಕಾಯ್ದೆ ಕಲಂ 16(2) ರಂತೆ ಅಧಿಸೂಚನೆ**

**ಕ್ರಮಾಂಕ: ಕಗೃಮಂ/ಭೂಸ್ವಾವಿ/6/2004-05, ದಿನಾಂಕ: 27ನೇ ಮೇ 2006**

ಭೂಸ್ವಾಧೀನ ಕಾಯ್ದೆ 1894ರ ಕಲಂ 16(2)ರ ಅನ್ವಯ ಕರ್ನಾಟಕ ಅಧಿನಿಯಮ 17/1961 ತಿದ್ದುಪಡಿ ಮೇರೆಗೆ ಈ ಅನುಸೂಚಿಯಲ್ಲಿ ಸೂಚಿಸಲಾದ ಜಮೀನುಗಳನ್ನು ಕರ್ನಾಟಕ ಗೃಹ ಮಂಡಳಿ, ಬೆಂಗಳೂರು, ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ, ವಸತಿ ಯೋಜನೆಯ ಸಲುವಾಗಿ ಅಧಿಕೃತವಾಗಿ ಭೂಸ್ವಾಧೀನ ಅಧಿನಿಯಮ ಪ್ರಕರಣ 16(1) ರಂತೆ ಜಮೀನಿನ ಸುಪರ್ದನ್ನು ಮಂಡಳಿಯ ವಶಕ್ಕೆ ಪಡೆಯಲಾಗಿದೆ ಎಂದು ಈ ಮೂಲಕ ಅಧಿಸೂಚಿಸಲಾಗಿದೆ.

**ಅನುಸೂಚಿ**

**ಜಿಲ್ಲೆ: ಚಾಮರಾಜನಗರ** **ತಾಲ್ಲೂಕು: ಚಾಮರಾಜನಗರ** **ಹೋಬಳಿ: ಕಸಬಾ** **ಗ್ರಾಮ: ಚಾಮರಾಜನಗರ**

| ಕ್ರ. ಸಂ | ಸರ್ವೆ ನಂ. | ತರಹೆ | ವಿಸ್ತೀರ್ಣ ಎ-ಗುಂಟೆ | ವಶಪಡಿಸಿಕೊಂಡ ದಿನಾಂಕ: |
|---|---|---|---|---|
| 1 | 652 | ಖುಷ್ಕಿ | 0-20 | 27.3.2006 |
| 2 | 652 | ಖುಷ್ಕಿ | 1-18 | 27.3.2006 |
| 3 | 653 | ಖುಷ್ಕಿ | 2-18 | 27.3.2006 |
| 4 | 654/1 | ಖುಷ್ಕಿ | 1-11 1/2 | 27.3.2006 |
| 5 | 654/3 | ಖುಷ್ಕಿ | 1-11 1/2 | 27.3.2006 |
| 6 | 654/2 | ಖುಷ್ಕಿ | 2-31 | 27.3.2006 |
| 7 | 665 | ಖುಷ್ಕಿ | 5-21 | 27.3.2006 |
| **ಒಟ್ಟು** | | | **15-11** | |

ವಿಶೇಷ ಭೂಸ್ವಾಧೀನಾಧಿಕಾರಿಗಳು
ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

ಪಿ.ಡಿ. 59

**ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಯವರ ಕಛೇರಿ, ದ.ಕ. ಮಂಗಳೂರು**

**ಪ್ರಕಟಣೆ ಸಂಖ್ಯೆ: ಜಿಸಕಅ:ಎಸ್-3:ಸಿಆರ್:12:2006-07, ದಿನಾಂಕ: 7ನೇ ಜುಲೈ 2006**

**ವಿಷಯ:** ದ.ಕ. ಜಿಲ್ಲೆಯಲ್ಲಿರುವ ಪ.ಜಾತಿ ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ತರಬೇತಿಯನ್ನು ನೀಡಲು 2006-07ನೇ ಸಾಲಿನ ಅರ್ಜಿಗಳನ್ನು ಕರೆದಿರುವ ಬಗ್ಗೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಪ.ಜಾತಿ ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ತರಬೇತಿಯನ್ನು ನೀಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಕರೆಯಲಾಗಿದೆ. ಇಚ್ಛೆಯುಳ್ಳ ಅರ್ಹ ಅಭ್ಯರ್ಥಿಗಳು ನಿಗದಿಪಡಿಸಿದ ಅರ್ಜಿ ನಮೂನೆಯಲ್ಲಿ ಪೂರ್ಣ ಭರ್ತಿ ಮಾಡಿ,

ಕೇಳಿರುವ ಎಲ್ಲಾ ದಾಖಲಾತಿಗಳೊಂದಿಗೆ ದಿನಾಂಕ: 10.08.2006 ರೊಳಗಡೆ, ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಉರ್ವಸ್ಟೋರ್ಸ್, ಮಂಗಳೂರು - ಇವರಿಗೆ ಸಲ್ಲಿಸಬಹುದಾಗಿದೆ.

1. ಪರಿಶಿಷ್ಟ ಜಾತಿಗೆ ಸೇರಿದ ಜನಾಂಗದವರಾಗಿರಬೇಕು.
2. ಅಭ್ಯರ್ಥಿಯ ಕುಟುಂಬದ ವಾರ್ಷಿಕ ಆದಾಯದ ರೂ.18000.00 ಗಳಿಗೆ ಮೀರಿರಬಾರದು.
3. ಅರ್ಜಿಯನ್ನು ಪಡೆಯಲು ನಿಗದಿಪಡಿಸಿದ ಕೊನೆಯ ದಿನಾಂಕದ ವರೆಗೆ ಅಭ್ಯರ್ಥಿಯ ಗರಿಷ್ಟ ವಯೋಮಿತಿ 35 ವರ್ಷ ಆಗಿರತಕ್ಕದ್ದು.
4. ಅರ್ಜಿಯನ್ನು ಸಲ್ಲಿಸಲು ಕೊನೆಯ ದಿನಾಂಕ: 10.8.2006 ಆಗಿರುತ್ತದೆ.
5. ವಕೀಲ ವೃತ್ತಿಯನ್ನು ನಡೆಸಲು ಅರ್ಹವಾದ ಕಾನೂನು ಪದವಿಯಲ್ಲಿ ಉತ್ತೀರ್ಣರಾಗಿರಬೇಕು. ಹಾಗೂ ಈ ಕಾನೂನು ಪದವಿಯಲ್ಲಿ ಅರ್ಜಿ ಸಲ್ಲಿಸಿದ ಕೊನೆಯ ದಿನಾಂಕಕ್ಕೆ ಹಿಂದಿನ 2 ವರ್ಷಗಳ ಅವಧಿಯೊಳಗೆ ಪಡೆದಿರತಕ್ಕದ್ದು. ಮಹಿಳೆಯರಿಗೆ ಆದ್ಯತೆ ನೀಡಲಾಗುತ್ತದೆ.
6. ಅಪೂರ್ಣ ಅರ್ಜಿ, ತಡವಾಗಿ ಬಂದ ಅರ್ಜಿ, ಹಾಗೂ ನಿಬಂಧನೆಗಳನ್ನು ಪೂರೈಸದ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಅರ್ಹ ಅರ್ಜಿಗಳ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆಯಲಾಗುವುದು.
7. ನಿಗದಿತ ಅರ್ಜಿ ನಮೂನೆಯೊಂದಿಗೆ ಅರ್ಜಿಯಲ್ಲಿ ಕೇಳಿರುವ ಎಲ್ಲಾ ಪ್ರಮಾಣ ಪತ್ರಗಳ ದೃಢೀಕರಣ ಪತ್ರಗಳನ್ನು ಲಗತ್ತಿರಬೇಕು.
8. ದಕ್ಷಿಣ ಕನ್ನಡ ಜಿಲ್ಲೆಯವರು ಮಾತ್ರ ಅರ್ಜಿ ಸಲ್ಲಿಸಲು ಅರ್ಹರು.

**ತರಬೇತಿ ವಿವರ**

1) ದಕ್ಷಿಣ ಕನ್ನಡ ಜಿಲ್ಲೆಯ ಹತ್ತು ಅಭ್ಯರ್ಥಿಗಳನ್ನು ಮಾತ್ರ ಈ ತರಬೇತಿಗೆ ಆಯ್ಕೆ ಮಾಡಲಾಗುವುದು.
2) ಈ ತರಬೇತಿಯ ಅವಧಿಯು 4 ವರ್ಷಗಳಾಗಿದ್ದು, ಆಯ್ಕೆಯಾದ ಅಭ್ಯರ್ಥಿಗೆ ಮಾಹೆಯಾನ ರೂ.1,000.00 ಶಿಷ್ಯವೇತನವನ್ನು ಈ ಅವಧಿಯಲ್ಲಿ ನೀಡಲಾಗುವುದು.
3) ಜಿಲ್ಲಾ ಆಯ್ಕೆ ಸಮಿತಿಯಿಂದ ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್ ಸರ್ಕಾರಿ ವಕೀಲರು, ಅಥವಾ ಕನಿಷ್ಟ 20 ವರ್ಷಗಳ ವಕೀಲಿ ವೃತ್ತಿಯಲ್ಲಿ ಅನುಭವವುಳ್ಳ ವಕೀಲರ ಅಧೀನದಲ್ಲಿ ತರಬೇತಿ ನಿಯೋಜಿಸಲಾಗುವುದು. ತಾಲ್ಲೂಕು ಮಟ್ಟದಲ್ಲಿ ಸರಕಾರಿ ವಕೀಲರು ಮತ್ತು ಕನಿಷ್ಠ 20 ವರ್ಷಗಳ ವಕೀಲಿ ವೃತ್ತಿಯಲ್ಲಿ ಅನುಭವವುಳ್ಳ ವಕೀಲರ ಅಧೀನದಲ್ಲಿ ತರಬೇತಿಗೆ ನಿಯೋಜಿಸುವುದು.
4) ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಯು ತಾನು ಆಯ್ಕೆಯಾದುದನ್ನು 15 ದಿನದ ಒಳಗೆ ಅಂಗೀಕಾರವನ್ನು ತಿಳಿಸಬೇಕಾಗಿದೆ. ಆಯ್ಕೆಯಾದ ಅಭ್ಯರ್ಥಿಯು ಅವರ ಅಂಗೀಕಾರವನ್ನು ನಿಗದಿತ ಸಮಯದೊಳಗೆ ತಿಳಿಸದಿದ್ದಲ್ಲಿ ಅವರ ಆಯ್ಕೆಯನ್ನು ರದ್ದುಪಡಿಸಲಾಗುವುದು. ಹಾಗೂ ಇವರ ಬದಲಿಗೆ ಕಾಯ್ದಿರಿಸಿದ ಪಟ್ಟಿಯಂತೆ ಅರ್ಹ ಅಭ್ಯರ್ಥಿಗಳನ್ನು ಅರ್ಹತೆಗನುಸಾರವಾಗಿ ಆಯ್ಕೆ ಮಾಡಲಾಗುವುದು.
5) ಆಯ್ಕೆಯಾದ ಅಭ್ಯರ್ಥಿಯು ತರಬೇತಿಗೆ ಹೋಗುವ ಮುಂದೆ ತಾನು ಈ ತರಬೇತಿಯನ್ನು ಮಧ್ಯದಲ್ಲಿ ಬಿಟ್ಟು ಹೋಗುವುದಿಲ್ಲವೆಂದು ಹಾಗೂ ಈ ತರಬೇತಿಯನ್ನು ಮಧ್ಯದಲ್ಲಿ ಬಿಟ್ಟು ಹೋದಲ್ಲಿ ತರಬೇತಿಯ ಒಟ್ಟು ವೆಚ್ಚವನ್ನು ಹಾಗೂ ವೆಚ್ಚಕ್ಕೆ ಶೇಕಡಾ 10 ರಂತೆ ಬಡ್ಡಿಯನ್ನು ಸರಕಾರಕ್ಕೆ ಪಾವತಿ ಮಾಡಲು ತನ್ನ ಒಪ್ಪಿಗೆ ಇರುತ್ತದೆ ಎಂಬುದಕ್ಕೆ ಮುಚ್ಚಳಿಕೆ ಪತ್ರವನ್ನು ಛಾಪಾ ಕಾಗದದಲ್ಲಿ ಬರೆದು ಕೊಡಬೇಕಾಗುತ್ತದೆ.
6) ಸುಳ್ಳು ಮಾಹಿತಿ ಹಾಗೂ ಸುಳ್ಳು ಪ್ರಮಾಣ ಪತ್ರಗಳನ್ನು ನೀಡಿದ ಅಭ್ಯರ್ಥಿಗಳ ಮೇಲೆ ಕಾನೂನು ರೀತ್ಯಾ ಕ್ರಮ ಕೈಗೊಳ್ಳಲಾಗುವುದು.
7) ಅರ್ಜಿಗಳನ್ನು ನಿಗದಿತ ನಮೂನೆಯಲ್ಲಿ ಭರ್ತಿ ಮಾಡಿ, ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ, ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಉರ್ವಸ್ಟೋರ್ಸ್, ಮಂಗಳೂರು-ಇವರಿಗೆ ಸಲ್ಲಿಸಲು ತಿಳಿಸಲಾಗಿದೆ. ನಿಗದಿಪಡಿಸಿದ ಅರ್ಜಿಗಳನ್ನು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ ಕಛೇರಿ, ಮಂಗಳೂರು - ಇಲ್ಲಿಂದ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ.

ಪಿ.ಆರ್. 1146 ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ, ದ.ಕ. ಮಂಗಳೂರು.

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಉಪ ನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ರವರ ಕಾರ್ಯಾಲಯ**

**ಕ್ರ.ಸಂ: ಡಿಆರ್‌ಬಿ-2/ಸಮಾಪನೆ/61/1998-99, ದಿನಾಂಕ: 30ನೇ ಜೂನ್ 2006**

**ವಿಷಯ:** ಸಮಾಪನೆಗೊಂಡ ಸಹಕಾರ ಸಂಘಗಳ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ:** 1) ಈ ಕಛೇರಿ ಆದೇಶ ಸಮಸಂಖ್ಯೆ ದಿನಾಂಕ: 26.3.1999.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ, ಬೆಂಗಳೂರು ಇವರ ಪ್ರಸ್ತಾವ ಸಂಖ್ಯೆ: ಎಆರ್‌ಬಿ-50/ಸಮಾಪನೆ/14/2006-07, ದಿನಾಂಕ: 07.06.2006.

**ಪ್ರಸ್ತಾವನೆ:**

ಬೆಂಗಳೂರು ರೂರಲ್ ಎಸ್‌ಸಿ/ಎಸ್‌ಟಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು, ಸದರಿ ಸಹಕಾರ ಸಂಘವನ್ನು ನೋಂದಣಿ ಸಂಖ್ಯೆ: ಡಿಆರ್‌ಬಿ/ಆರ್‌ಜಿಎನ್/1437/73-74, ದಿನಾಂಕ: 19.06.73 ರನ್ವಯ ನೋಂದಣಿ ಮಾಡಿ, ನಂತರ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ/ಸಮಾಪನೆ/61/98-99, ದಿನಾಂಕ: 26.03.99 ರಂತೆ ಪತ್ರಿಕಾ ಪ್ರಕಟಣೆ ನೀಡಿ ಸಮಾಪನೆಗೊಳಿಸಲಾಗಿತ್ತು. ಆದರೆ ಸಂಘದ ವಿಳಾಸ, ಲೆಕ್ಕಪುಸ್ತಕಗಳು ಮತ್ತು ಇನ್ನಾವುದೇ ಮಾಹಿತಿ ಲಭ್ಯವಿಲ್ಲದ ಕಾರಣ ಸಮಾಪನಾಧಿಕಾರಿಯನ್ನು ನೇಮಕ ಮಾಡಿರಲಿಲ್ಲ.

ಸಮಾಪನೆಗೊಂಡ ಈ ಸಹಕಾರ ಸಂಘದ ಸದಸ್ಯರಿಂದಾಗಲೀ ಅಥವಾ ಸಾರ್ವಜನಿಕರಿಂದಾಗಲೀ, ಮೇಲ್ಮನವಿಯಾಗಲೀ ಅಥವಾ ಆಕ್ಷೇಪಣೆಗಳಾಗಲೀ ಸುಮಾರು 6-7 ವರ್ಷಗಳಾದರೂ ಬಂದಿರುವುದಿಲ್ಲ. ಆದ್ದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೆಂಗಳೂರು ಮೂರನೇ ವೃತ್ತ ಇವರು ಉಲ್ಲೇಖದಲ್ಲಿರುವ ಪ್ರಸ್ತಾವದಲ್ಲಿ, ಸದರಿ ಸಂಘದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಬೆಂಗಳೂರು ರೂರಲ್ ಎಸ್‌ಸಿ/ಎಸ್‌ಟಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು, ಸದರಿ ಸಂಘದ ನೋಂದಣಿ ಸಂಖ್ಯೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರಲ್ಲಿ ಪ್ರತ್ಯಾಯೋಜನೆಯಾಗಿರುವ ಅಧಿಕಾರವನ್ನು ಚಲಾಯಿಸಿ, ಸಹಕಾರ ಸಂಘಗಳ ಉಪ

ನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ ಆದ ನಾನು ರದ್ದುಪಡಿಸಿರುತ್ತೇನೆ. ಇದರಿಂದಾಗಿ ಸದರಿ ಸಂಘವು ಈ ಆದೇಶದ ದಿನಾಂಕದಿಂದ ವಿಸರ್ಜನೆಯಾಗಿರುತ್ತದೆ. ಮತ್ತು ಈ ಆದೇಶದ ದಿನಾಂಕದಿಂದ ಸಾಂಘಿಕ (ಕಾರ್ಪೋರೇಟ್ ಬಾಡಿ) ಸಂಸ್ಥೆಯಾಗಿರುವುದು ನಿಂತು ಹೋಗಿರುತ್ತದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಮೊಹರಿನೊಂದಿಗೆ ದಿನಾಂಕ: 30.06.2006 ರಂದು ಹೊರಡಿಸಲಾಗಿದೆ.

**ಡಾ: ಕೆ.ಸಿ. ಯತೀಶ್ ಕುಮಾರ್**

ಪಿ.ಆರ್. 1058 ಸಹಕಾರ ಸಂಘಗಳ ಉಪ ನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ರವರ ಕಾರ್ಯಾಲಯ

**ಕ್ರ.ಸಂ: ಡಿಆರ್‌ಬಿ-2/ಸಮಾಪನೆ/61/1998-99, ದಿನಾಂಕ: 30ನೇ ಜೂನ್ 2006**

**ವಿಷಯ:** ಸಮಾಪನೆಗೊಂಡ ಸಹಕಾರ ಸಂಘಗಳ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ:** 1) ಈ ಕಛೇರಿ ಆದೇಶ ಸಮಸಂಖ್ಯೆ ದಿನಾಂಕ: 26.3.1999.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ, ಬೆಂಗಳೂರು ಇವರ ಪ್ರಸ್ತಾವ ಸಂಖ್ಯೆ: ಎಆರ್‌ಬಿ-50/ಸಮಾಪನೆ/16/2006-07, ದಿನಾಂಕ: 07.06.2006.

**ಪ್ರಸ್ತಾವನೆ:**

ಹರಿಜನ/ಗಿರಿಜನ ಗೃಹ ನಿರ್ಮಾಣ ಸಹಕಾರ ಸಂಘ ನಿ., ಫ್ರೇಜರ್‌ಟೌನ್, ಬೆಂಗಳೂರು, ಸದರಿ ಸಹಕಾರ ಸಂಘವನ್ನು ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ/ಸಮಾಪನೆ/61/98-99, ದಿನಾಂಕ: 26.03.99 ರಂತೆ ಸಮಾಪನೆಗೊಳಿಸಲಾಗಿತ್ತು. ಈ ಸಂಘದ ಸಮಾಪನೆ ಬಗ್ಗೆ ಸಂಜೆವಾಣಿ ದಿನ ಪತ್ರಿಕೆಯಲ್ಲಿ ದಿನಾಂಕ: 25.2.99 ರಂದು ಪ್ರಕಟಣೆ ನೀಡಲಾಗಿತ್ತು. ಆದರೆ ಸಂಘದ ವಿಳಾಸ, ಲೆಕ್ಕಪುಸ್ತಕಗಳು ಮತ್ತು ಇನ್ನಾವುದೇ ಮಾಹಿತಿ ಲಭ್ಯವಿಲ್ಲದ ಕಾರಣ ಸಮಾಪನಾಧಿಕಾರಿಯನ್ನು ನೇಮಕ ಮಾಡಿರಲಿಲ್ಲ.

ಸಮಾಪನೆಗೊಂಡ ಈ ಸಹಕಾರ ಸಂಘದ ಸದಸ್ಯರಿಂದಾಗಲೀ ಅಥವಾ ಸಾರ್ವಜನಿಕರಿಂದಾಗಲೀ, ಮೇಲ್ಮನವಿಯಾಗಲೀ ಅಥವಾ ಆಕ್ಷೇಪಣೆಗಳಾಗಲೀ ಸುಮಾರು 7(ಏಳು) ವರ್ಷಗಳಾದರೂ ಬಂದಿರುವುದಿಲ್ಲ. ಆದ್ದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೆಂಗಳೂರು ಮೂರನೇ ವೃತ್ತ ಇವರು ಉಲ್ಲೇಖದಲ್ಲಿರುವ ಪ್ರಸ್ತಾವದಲ್ಲಿ, ಸದರಿ ಸಂಘದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ

ಹರಿಜನ/ಗಿರಿಜನ ಗೃಹ ನಿರ್ಮಾಣ ಸಹಕಾರ ಸಂಘ ನಿ., ಫ್ರೇಜರ್‌ಟೌನ್, ಬೆಂಗಳೂರು, ಸದರಿ ಸಂಘದ ನೋಂದಣಿ ಸಂಖ್ಯೆ: ಡಿಆರ್‌ಬಿ/ಆರ್‌ಜಿ/3086, ದಿನಾಂಕ: 24.6.75ನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರಲ್ಲಿ ಪ್ರತ್ಯಾಯೋಜನೆಯಾಗಿರುವ ಅಧಿಕಾರವನ್ನು ಚಲಾಯಿಸಿ, ಸಹಕಾರ ಸಂಘಗಳ ಉಪ ನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ ಆದ ನಾನು ರದ್ದುಪಡಿಸಿರುತ್ತೇನೆ. ಇದರಿಂದಾಗಿ ಸದರಿ ಸಂಘವು ಈ ಆದೇಶದ ದಿನಾಂಕದಿಂದ ವಿಸರ್ಜನೆಯಾಗಿರುತ್ತದೆ. ಮತ್ತು ಈ ಆದೇಶದ ದಿನಾಂಕದಿಂದ ಸಾಂಘಿಕ (ಕಾರ್ಪೋರೇಟ್ ಬಾಡಿ) ಸಂಸ್ಥೆಯಾಗಿರುವುದು ನಿಂತು ಹೋಗಿರುತ್ತದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಮೊಹರಿನೊಂದಿಗೆ ದಿನಾಂಕ: 30.06.2006 ರಂದು ಹೊರಡಿಸಲಾಗಿದೆ.

**ಡಾ: ಕೆ.ಸಿ. ಯತೀಶ್ ಕುಮಾರ್**

ಪಿ.ಆರ್. 1059 ಸಹಕಾರ ಸಂಘಗಳ ಉಪ ನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ರವರ ಕಾರ್ಯಾಲಯ

**ಕ್ರ.ಸಂ: ಡಿಆರ್‌ಬಿ-2/ಸಮಾಪನೆ/61/1998-99, ದಿನಾಂಕ: 30ನೇ ಜೂನ್ 2006**

**ವಿಷಯ:** ಸಮಾಪನೆಗೊಂಡ ಸಹಕಾರ ಸಂಘಗಳ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ:** 1) ಈ ಕಛೇರಿ ಆದೇಶ ಸಮಸಂಖ್ಯೆ ದಿನಾಂಕ: 26.3.1999.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ, ಬೆಂಗಳೂರು ಇವರ ಪ್ರಸ್ತಾವ ಸಂಖ್ಯೆ: ಎಆರ್‌ಬಿ-50/ಸಮಾಪನೆ/15/2006-07, ದಿನಾಂಕ: 07.06.2006.

**ಪ್ರಸ್ತಾವನೆ:**

ಎಸ್.ಕೆ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ರಾಮಸ್ವಾಮಿಪಾಳ್ಯ ಲೇಔಟ್, ಬೆಂಗಳೂರು, ಸದರಿ ಸಹಕಾರ ಸಂಘವನ್ನು ನೋಂದಣಿ ಸಂಖ್ಯೆ: ಡಿಆರ್‌ಬಿ/ಆರ್‌ಜಿಎನ್/2244/72-73, ದಿನಾಂಕ: 31.12.1972 ರನ್ವಯ ನೋಂದಣಿ ಮಾಡಿ, ನಂತರ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ/ಸಮಾಪನೆ/61/98-99, ದಿನಾಂಕ: 26.03.99 ರಂತೆ ಪತ್ರಿಕಾ ಪ್ರಕಟಣೆ ನೀಡಿ ಸಮಾಪನೆಗೊಳಿಸಲಾಗಿತ್ತು. ಆದರೆ ಸಂಘದ ವಿಳಾಸ, ಲೆಕ್ಕಪುಸ್ತಕಗಳು ಮತ್ತು ಇನ್ನಾವುದೇ ಮಾಹಿತಿ ಲಭ್ಯವಿಲ್ಲದ ಕಾರಣ ಸಮಾಪನಾಧಿಕಾರಿಯನ್ನು ನೇಮಕ ಮಾಡಿರಲಿಲ್ಲ.

ಸಮಾಪನೆಗೊಂಡ ಈ ಸಹಕಾರ ಸಂಘದ ಸದಸ್ಯರಿಂದಾಗಲೀ ಅಥವಾ ಸಾರ್ವಜನಿಕರಿಂದಾಗಲೀ, ಮೇಲ್ಮನವಿಯಾಗಲೀ ಅಥವಾ ಆಕ್ಷೇಪಣೆಗಳಾಗಲೀ ಸುಮಾರು 6-7 ವರ್ಷಗಳಾದರೂ ಬಂದಿರುವುದಿಲ್ಲ. ಆದ್ದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೆಂಗಳೂರು ಮೂರನೇ ವೃತ್ತ ಇವರು ಉಲ್ಲೇಖದಲ್ಲಿರುವ ಪ್ರಸ್ತಾವದಲ್ಲಿ, ಸದರಿ ಸಂಘದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ

ಎಸ್.ಕೆ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ರಾಮಸ್ವಾಮಿಪಾಳ್ಯ ಲೇಔಟ್, ಬೆಂಗಳೂರು, ಸದರಿ ಸಂಘದ ನೋಂದಣಿ ಸಂಖ್ಯೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರಲ್ಲಿ ಪ್ರತ್ಯಾಯೋಜನೆಯಾಗಿರುವ ಅಧಿಕಾರವನ್ನು ಚಲಾಯಿಸಿ, ಸಹಕಾರ

ಸಂಘಗಳ ಉಪ ನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ ಆದ ನಾನು ರದ್ದುಪಡಿಸಿರುತ್ತೇನೆ. ಇದರಿಂದಾಗಿ ಸದರಿ ಸಂಘವು ಈ ಆದೇಶದ ದಿನಾಂಕದಿಂದ ವಿಸರ್ಜನೆಯಾಗಿರುತ್ತದೆ. ಮತ್ತು ಈ ಆದೇಶದ ದಿನಾಂಕದಿಂದ ಸಾಂಘಿಕ (ಕಾರ್ಪೋರೇಟ್ ಬಾಡಿ) ಸಂಸ್ಥೆಯಾಗಿರುವುದು ನಿಂತು ಹೋಗಿರುತ್ತದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಮೊಹರಿನೊಂದಿಗೆ ದಿನಾಂಕ: 30.06.2006 ರಂದು ಹೊರಡಿಸಲಾಗಿದೆ.

**ಡಾ: ಕೆ.ಸಿ. ಯತೀಶ್ ಕುಮಾರ್**

ಪಿ.ಆರ್. 1060 ಸಹಕಾರ ಸಂಘಗಳ ಉಪ ನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು

**ಸಂಖ್ಯೆ: ಕಾಪಕಾ:ಎಫ್:ಸಿಆರ್-23:2006, ದಿನಾಂಕ: 12ನೇ ಜುಲೈ 2006**

**ಅರ್ಜಿದಾರರು:**

1) ಶ್ರೀ ನಾರಾಯಣ ಶೆಟ್ಟಿ ಬಿನ್ ವೀರಪ್ಪ ಶೆಟ್ಟಿ
2) ಶ್ರೀಮತಿ ಲಲಿತಮ್ಮ ಕೋಂ ನಾರಾಯಣಶೆಟ್ಟಿ
3) ರತ್ನ ಕೋಂ ನಾರಾಯಣಶೆಟ್ಟಿ
ಕುರುವಂಗಿ ಗ್ರಾಮ ಕಸಬ ಹೋಬಳಿ, ಚಿಕ್ಕಮಗಳೂರು ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು:**

1) ನಾಸಿರ್‌ಪಾಷ ಬಿನ್ ಅಬ್ದುಲ್ ಗಫಾರ್, ಡ್ರೈವರ್, ಅಲೇನಹಳ್ಳಿ ಗ್ರಾಮ, ಚಿಕ್ಕಮಗಳೂರು.
2) ಬಿ.ಆರ್. ಸುಬ್ಬಯ್ಯ ಬಿನ್ ರಾಮಯ್ಯ, ಬೆಟ್ಟಗೆರೆ ಹಳ್ಳಿ, ಮೂಡಿಗೆರೆ ತಾಲ್ಲೂಕು.
3) ನವೀದ್ ಅಹಮದ್, ಪ್ರೋ. ರಿಯಲ್ ಲೈಫ್ ಡಿಸ್ಟ್ರಿಬ್ಯೂಟರ್ಸ್ ಮತ್ತು ಎಸ್.ಟಿ.ಡಿ. ಸೆಂಟರ್ ಮಲ್ಲಂದೂರು ರಸ್ತೆ, ಚಿಕ್ಕಮಗಳೂರು.

**ಪ್ರಕಟಣೆ**

ಯೋಗೇಶ ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 27.09.2002 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರೆಂದು ಕೇಳಿಕೊಳ್ಳುವುದಾದರೆ, ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ, ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದಿದ್ದಲ್ಲಿ, ಅರ್ಜಿದಾರರನ್ನು ಹೊರತುಪಡಿಸಿ, ಮೃತರ ಅವಲಂಬಿತರು ಯಾರು ಇಲ್ಲವೆಂದು ಪರಿಗಣಿಸಿ, ಮೇಲ್ಕಂಡ ಅರ್ಜಿದಾರರ ಕ್ಲೇಮು ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,

ಪಿ.ಆರ್. 1071 ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು.

## ಕರ್ನಾಟಕ ಲೋಕ ಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು-01

**ಅಧಿಸೂಚನೆ ಸಂಖ್ಯೆ: ಇ(1)115/2006-07/ಪಿಎಸ್‌ಸಿ, ದಿನಾಂಕ: 13ನೇ ಜುಲೈ 2006**

**ವಿಷಯ:** 2005ನೇ ಸಾಲಿನ ಗೆಜೆಟೆಡ್ ಪ್ರೊಬೇಷನರ್ಸ್ ಮುಖ್ಯ ಪರೀಕ್ಷೆಯಲ್ಲಿ ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿದ ಶ್ರೀ ಮುಷ್ತಾಕ್ ಅಹಮದ್ (ನೋಂ.ಸಂ.114143) ಇವರಿಗೆ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1) ಶ್ರೀ ಮುಷ್ತಾಕ್ ಅಹಮದ್ ಇವರು 2005ನೇ ಸಾಲಿಗೆ ಗೆಜೆಟೆಡ್ ಪ್ರೊಬೇಷನರ್ಸ್ ಹುದ್ದೆಗೆ ಸಲ್ಲಿಸಿದ ಅರ್ಜಿ.
2) ಸದರಿ ಅಭ್ಯರ್ಥಿಗೆ ಜಾರಿ ಮಾಡಿರುವ ಕಾರಣ ಕೇಳುವ ನೋಟೀಸಿನ ಸಂಖ್ಯೆ: ಆರ್.ಹೆಚ್.ಎಸ್.266/2005-06/ಪಿಎಸ್‌ಸಿ, ದಿನಾಂಕ: 13.12.2005.
3) ಸದರಿ ಅಭ್ಯರ್ಥಿಯು ದಿನಾಂಕ: 21.12.2005 ರಂದು ಸಲ್ಲಿಸಿರುವ ಕಾರಣ ಕೇಳುವ ನೋಟೀಸಿಗೆ ಉತ್ತರ.
4) ವಿಚಾರಣಾಧಿಕಾರಿಗಳ ನಡವಳಿ ದಿನಾಂಕ: 20.03.2006.
5) ವಿಚಾರಣಾ ವರದಿ 12.05.2006.

**ಪ್ರಸ್ತಾವನೆ:**

ಮೇಲೆ ಓದಲಾದ (1) ರನ್ವಯ ಮುಷ್ತಾಕ್ ಅಹಮದ್ ಇವರು 2005ನೇ ಸಾಲಿನ ಗೆಜೆಟೆಡ್ ಪ್ರೊಬೆಷನರ್ಸ್ ಮುಖ್ಯ ಪರೀಕ್ಷೆಗೆ ಸಲ್ಲಿಸಿದ್ದ ಅರ್ಜಿಯ ಮೇರೆಗೆ ಇವರಿಗೆ ಸದರಿ ಪರೀಕ್ಷೆ ತೆಗೆದುಕೊಳ್ಳಲು ನೋಂದಣಿ ಸಂಖ್ಯೆ: 114143ರ ಪ್ರವೇಶ ಪತ್ರವನ್ನು ಜಾರಿ ಮಾಡಲಾಗಿತ್ತು. ಅದರಂತೆ ಇವರು ದಿನಾಂಕ: 23.07.2005 ರಂದು ಸಾಮಾನ್ಯ ಅಧ್ಯಯನ ಭಾಗ-1 ಮತ್ತು ಭಾಗ-2ರ ಪರೀಕ್ಷೆಗಳಿಗೆ ಹಾಜರಾಗಿ ಉತ್ತರ ಪತ್ರಿಕೆಯ ಮುಖಪುಟದ ಅಂಕಪಟ್ಟಿಯಲ್ಲಿ ಮೌಲ್ಯಮಾಪಕರು ಮೌಲ್ಯಮಾಪನ ಮಾಡಿದ ತರುವಾಯ ಪಡೆದ ಅಂಕಗಳನ್ನು ನಮೂದಿಸುವ ಅಂಕಣಗಳಲ್ಲಿ ಟಿಕ್ (✓) ಮಾಡಿ ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿರುತ್ತಾರೆ ಎಂಬುದಾಗಿ ಪರೀಕ್ಷಕರು ವರದಿ ಮಾಡಿದ್ದ ಕಾರಣ ಮೇಲೆ ಓದಲಾದ (2) ರನ್ವಯ ಸದರಿ ಅಭ್ಯರ್ಥಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಸದರಿ ನೋಟೀಸಿಗೆ ಉತ್ತರವಾಗಿ ಶ್ರೀ ಮುಷ್ತಾಕ್ ಅಹಮದ್‌ರವರು ತಾನು ಯಾವುದೇ ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿರುವುದಿಲ್ಲವೆಂದು ಲಿಖಿತ ಹೇಳಿಕೆ ಸಲ್ಲಿಸಿದ್ದರಿಂದ ಇವರ ವಿರುದ್ಧ ವಿಚಾರಣೆ ನಡೆಸಿ ವರದಿ ನೀಡುವಂತೆ ಶ್ರೀ ಎಸ್. ಅನಂತಮೂರ್ತಿ ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಅಧಿಸೂಚನೆ ಹೊರಡಿಸಲಾಗಿತ್ತು.

ಸದರಿ ಅಭ್ಯರ್ಥಿಯು ದಿನಾಂಕ: 20.03.2006 ರಂದು ವಿಚಾರಣಾಧಿಕಾರಿಗಳ ಮುಂದೆ ಹಾಜರಾಗಿ, ಅಂಕಗಳನ್ನು ನಮೂದಿಸಲು ಮೀಸಲಾಗಿದ್ದ ಅಂಕಣಗಳಲ್ಲಿ (✓) ಮಾಡಿರುವುದು ಪ್ರಮಾದವಶಾತ್ ಆದ ದುರುದ್ದೇಶ ರಹಿತವಾದ ತಪ್ಪೆಂದು, ಈ ತಪ್ಪಿಗೆ ಅಭ್ಯರ್ಥಿತನವನ್ನು ರದ್ದುಪಡಿಸುವಂತಹ ಕಠಿಣ ಶಿಕ್ಷೆಯನ್ನು ವಿಧಿಸಬಾರದೆಂದು ವಿನಂತಿಸಿರುತ್ತಾರೆ.

ಅಭ್ಯರ್ಥಿಯ ಹೇಳಿಕೆ ಮತ್ತು ಲಭ್ಯ ಇದ್ದ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ವಿಚಾರಣಾಧಿಕಾರಿಗಳು ದಿನಾಂಕ: 12.05.2006ರ ವರದಿಯಲ್ಲಿ ಅಭ್ಯರ್ಥಿಯ ಮೇಲೆ ಮಾಡಲಾದ ಆರೋಪವು ಸಾಬೀತಾಗಿದೆ ಎಂದು ತಮ್ಮ ವರದಿಯನ್ನು ನೀಡಿದ್ದು ಆಯೋಗವು ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಕೆಳಗಿನಂತೆ ದಂಡನೆ ವಿಧಿಸಲು ಆದೇಶಿಸಿದೆ.

**ಆದೇಶ ಸಂಖ್ಯೆ: ಇ(1)115/2006-07/ಪಿಎಸ್‌ಸಿ, ದಿನಾಂಕ: 13ನೇ ಜುಲೈ 2006**

ಕರ್ನಾಟಕ ಲೋಕಸೇವಾ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ: ಆಡಳಿತ 398/93-94/ಪಿಎಸ್‌ಸಿ, ದಿನಾಂಕ: 14.09.1993 ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಮುಷ್ತಾಕ್ ಅಹಮದ್ ಬಿನ್ ಮುನೀರ್ ಅಹಮದ್, ನಂ.290, 5ನೇ ಬ್ಲಾಕ್, ನೇತಾಜಿ ಸರ್ಕಲ್ ಹತ್ತಿರ, ಬಾಗೇಪಲ್ಲಿ, ಕೋಲಾರ ಜಿಲ್ಲೆ ಇವರ 2005ನೇ ಸಾಲಿನ ಗೆಜೆಟೆಡ್ ಪ್ರೊಬೇಷನರ್ಸ್ ಮುಖ್ಯ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸುವ ದಂಡನೆಯನ್ನು ವಿಧಿಸಲಾಗಿದೆ.

ಆಯೋಗದ ಆದೇಶದ ಮೇರೆಗೆ,

ಪಿ.ಆರ್. 1072 **ಬಿ.ಎಸ್. ರಾಮಪ್ರಸಾದ್**

ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ.

**ಸಹಕಾರ ಸಂಘಗಳ ಉಪ ನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ ರವರ ನ್ಯಾಯಾಲಯದಲ್ಲಿ**
**ದಾವಾ ಸಂಖ್ಯೆ: ಡಿಆರ್‌ಬಿ-2/ಎಂ.ಡಿ./05/2006-07**

**ವಾದಿ:**

ಶ್ರೀ ಕೆ. ರಘುನಂದನ್, ಬಿನ್ ಡಿಪಿಕೆ ಆಚಾರ್, ನಂ.1131, 18ನೇ ಕ್ರಾಸ್, 24ನೇ ಮೇನ್, ಬಿಎಸ್‌ಕೆ 2ನೇ ಹಂತ, ಬೆಂಗಳೂರು-70.

**ವಿರುದ್ಧ**

**ಪ್ರತಿವಾದಿ:**

1) ಶ್ರೀಮತಿ ಜಾಹ್ನವಿ ಆನಂದ್, ಕಾರ್ಯದರ್ಶಿ, ಶ್ರೀ ಲಕ್ಷ್ಮೀ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ.252, 1ನೇ ಫ್ಲೋರ್, 9ನೇ ಮೇನ್, ಸಂಪಂಗಿರಾಮನಗರ, ಬೆಂಗಳೂರು-27.
2) ಶ್ರೀ ತಿರುಮಲ್ಲೇಶ್, ಮಾಜಿ ನಿರ್ದೇಶಕರು, ನಂ.40, 12ನೇ ಕ್ರಾಸ್, 12ನೇ ಮೇನ್, ರಾಘವೇಂದ್ರ ಲೇಔಟ್, ಕಾಳಿದಾಸ ಲೇಔಟ್ ಹತ್ತಿರ, ಶ್ರೀನಗರ, ಬೆಂಗಳೂರು-50.
3) ಶ್ರೀಮತಿ ಸಂಧ್ಯಾ ಕೆ. ರಾವ್, ಕೋಂ ಗುರುರಾಜ್, ಮಾಜಿ ನಿರ್ದೇಶಕರು, ಶ್ರೀ ಲಕ್ಷ್ಮೀ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ.40, 12ನೇ ಕ್ರಾಸ್, 12ನೇ ಮೇನ್, ರಾಘವೇಂದ್ರ ಲೇಔಟ್, ಕಾಳಿದಾಸ ಲೇಔಟ್ ಹತ್ತಿರ, ಶ್ರೀನಗರ, ಬೆಂಗಳೂರು-50.
4) ಶ್ರೀಮತಿ ನಾಗಮ್ಮ ಮಾಜಿ ನಿರ್ದೇಶಕರು, ಶ್ರೀ ಲಕ್ಷ್ಮೀ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ.652, ಕನಕ ಪ್ಲಾಜಾ, 11ನೇ ಮೇನ್, 4ನೇ ಬ್ಲಾಕ್, ಜಯನಗರ, ಬೆಂಗಳೂರು-11.
5) ಶ್ರೀಮತಿ ಶಶಿಕಲಾ, ಮಾಜಿ ನಿರ್ದೇಶಕರು, ಶ್ರೀ ಲಕ್ಷ್ಮೀ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ.652, ಕನಕ ಪ್ಲಾಜಾ, 11ನೇ ಮೇನ್, 4ನೇ ಬ್ಲಾಕ್, ಜಯನಗರ, ಬೆಂಗಳೂರು-11.
6) ಶ್ರೀಮತಿ ಸುನಿತಾ, ಮಾಜಿ ನಿರ್ದೇಶಕರು, ಶ್ರೀ ಲಕ್ಷ್ಮೀ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ.652, ಕನಕ ಪ್ಲಾಜಾ, 11ನೇ ಮೇನ್, 4ನೇ ಬ್ಲಾಕ್, ಜಯನಗರ, ಬೆಂಗಳೂರು-11.
7) ಶ್ರೀ ಅಚ್ಯುತಾ, ಮಾಜಿ ನಿರ್ದೇಶಕರು, ಶ್ರೀ ಲಕ್ಷ್ಮೀ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ.652, ಕನಕ ಪ್ಲಾಜಾ, 11ನೇ ಮೇನ್, 4ನೇ ಬ್ಲಾಕ್, ಜಯನಗರ, ಬೆಂಗಳೂರು-11.
8) ಶ್ರೀ ರಾಘವೇಂದ್ರ, ಮಾಜಿ ನಿರ್ದೇಸಕರು, ಶ್ರೀ ಲಕ್ಷ್ಮೀ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ.652, ಕನಕ ಪ್ಲಾಜಾ, 11ನೇ ಮೇನ್, 4ನೇ ಬ್ಲಾಕ್, ಜಯನಗರ, ಬೆಂಗಳೂರು-11.
9) ಶ್ರೀಮತಿ ಗೀತಾ ಭಟ್, ಕೋಂ ವಾಸುದೇವ್ ಭಟ್, ಮಾಜಿ ನಿರ್ದೇಶಕರು, ನಂ.44, ಕಾರ್ಪೋ ನಂ.396, 2ನೇ ಸ್ಟೇಜ್, ಸ್ಯಾಟಿಲೈಟ್ ಟೌನ್ (ಉಪನಗರ), ಕೆಂಗೇರಿ, ಬೆಂಗಳೂರು-60.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡುವ ಬಗ್ಗೆ ನೋಟೀಸು:**

1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 70ರ ಅನ್ವಯ ಈ ನ್ಯಾಯಾಲಯದ ಮುಂದೆ ವಾದಿಯು ಸಲ್ಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ರೂ.1,00,000/- ಗಳನ್ನು ಸಾಲಿಯಾನ ಶೇ.18 ರಂತೆ ಬಡ್ಡಿಯೊಂದಿಗೆ ಪಾವತಿ ಮಾಡುವಂತೆ ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯು ಈ ದಾವ ಅರ್ಜಿಯನ್ನು ಮೇಲ್ಕಂಡ ಸಂಖ್ಯೆಯಲ್ಲಿ ನೋಂದಾಯಿಸಿಕೊಂಡು ಈ ನ್ಯಾಯಾಲಯದಲ್ಲಿ ಕಡತದ ಮೇಲೆ ತೆಗೆದುಕೊಂಡು ಈಗಾಗಲೇ ನೋಟೀಸ್ ನೀಡಲಾಗಿದೆ.

ವಾದಿಯು ಮೇಲ್ಕಂಡ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103ರ ಅನ್ವಯ ಸಲ್ಲಿಸಿರುವ ಅರ್ಜಿಯಲ್ಲಿ 9ನೇ ಪ್ರತಿವಾದಿ ಹೆಸರಿನಲ್ಲಿರುವ ಈ ಕೆಳಗಿನ ಷೆಡ್ಯೂಲ್ ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment Before Judgement) ಆದೇಶ ಮಾಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. 9ನೇ ಪ್ರತಿವಾದಿ ಹೆಸರಿನಲ್ಲಿರುವ ಷೆಡ್ಯೂಲ್ ನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು / ಪರಭಾರೆ ಮಾಡಲು ಉದ್ದೇಶಿಸಿದ್ದು, ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್ / ಡಿಕ್ರಿ ನೀಡಿದ್ದರೂ, ಸದರಿ ಅವಾರ್ಡ್ / ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪಾವತಿ ಮಾಡಲು ಯಾವುದೇ ರಹ ಇಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ, ವಾದಿಯು ಕಲಂ 103ರ ಅರ್ಜಿಯ ಜೊತೆಯಲ್ಲಿ ಸಲ್ಲಿಸಿರುವ ಈ ಪ್ರಮಾಣ ಪತ್ರದಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ ಪ್ರತಿವಾದಿಗಳು ಈ ಕೆಳಗಿನ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ, ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್ / ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣ ಮನವರಿಕೆಯಾಗಿರುತ್ತದೆ.

ಈ ಮೇಲಿನ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103ರ ಹಾಗೂ ಸರ್ಕಾರದ ಅಧಿಸೂಚನೆಯ ಕ್ರಮಾಂಕ: ಸಿಎಂಡಬ್ಲ್ಯೂ/69/ಸಿಎಲ್‌ಎಂ/2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಡಾ:ಕೆ.ಸಿ.ಯತೀಶ್ ಕುಮಾರ್, ಸಹಕಾರ ಸಂಘಗಳ ಉಪ ನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು 9ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಕಂಡ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದ್ದಲ್ಲಿ ರೂ.1,00,000-00 ಗಳನ್ನು ಬಡ್ಡಿ ಸಹಿತ ಈ ನ್ಯಾಯಾಲಯದ ಬೆಂಗಳೂರು ಜಿಲ್ಲಾ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ವೈಯಕ್ತಿಕ ಖಾತೆಯಲ್ಲಿ ದಿನಾಂಕ: 10.8.2006 ರೊಳಗಾಗಿ ಜಮಾ ಮಾಡಿ ಅಧಿಕೃತ ಮೂಲ ಚಲನ್ / ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರು ಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ಅಟ್ಯಾಜ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗೆ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ, ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸ್ ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ಶ್ರೀಮತಿ ಗೀತಾ ಭಟ್ ಕೋಂ ವಾಸುದೇವ್ ಭಟ್, 9ನೇ ಪ್ರತಿವಾದಿ ಇವರ ಸ್ಥಿರಾಸ್ತಿಯ ಸ್ವತ್ತು ನಂ.44, ಎಲ್‌ಐಜಿ 8ನೇ ಎ ಕ್ರಾಸ್, 2ನೇ ಸ್ಟೇಜ್, ಕೆಂಗೇರಿ ಉಪನಗರ, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು ಇದ್ದು, ಪೂರ್ವ-ಪಶ್ಚಿಮ 30 ಅಡಿ, ಉತ್ತರ-ದಕ್ಷಿಣ 33 ಅಡಿ, ಇದಕ್ಕೆ ಚಕ್ಕುಬಂದಿ:

ಪೂರ್ವಕ್ಕೆ : ಇತರೆ ಆಸ್ತಿ
ಪಶ್ಚಿಮಕ್ಕೆ : ಆಸ್ತಿ ನಂ.45
ಉತ್ತರಕ್ಕೆ : ರಸ್ತೆ
ದಕ್ಷಿಣಕ್ಕೆ : ಕನಸರ್‌ವೆನ್ಸಿ
ಒಟ್ಟು 990 ಚದುರ ಅಡಿ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಈ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 19.6.2006 ರಂದು ನೀಡಿರುತ್ತೇನೆ.

**ಡಾ: ಕೆ.ಸಿ. ಯತೀಶ್ ಕುಮಾರ್**
ಸಹಕಾರ ಸಂಘಗಳ ಉಪ ನಿಬಂಧಕರು-2,
ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

ಪಿ.ಆರ್. 1062

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ವಿಭಾಗ-3, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-560029**

**ಪ್ರಕಟಣೆ ಸಂಖ್ಯೆ: ಡಬ್ಲ್ಯೂಸಿಎ/ಎಫ್‌ಸಿ/ಸಿಆರ್-88/2006-07, ದಿನಾಂಕ: 10ನೇ ಜುಲೈ 2006**

**ಅರ್ಜಿದಾರರು:**

1. ಶ್ರೀಮತಿ ವೆಂಕಟಲಕ್ಷ್ಮಮ್ಮ ಕೋಂ ಮೃತ ನಾಗಪ್ಪ,
2. ಕು: ನರಸಿಂಹಮೂರ್ತಿ, ದೊಡ್ಡ ಜಾಲ ವಿಲೇಜ್, ಜಾಲ ಹೋಬಳಿ, ಬೆಂಗಳೂರು ಉತ್ತರ ತಾಲ್ಲೂಕು.

**ಪ್ರತಿವಾದಿಗಳು:**

1) ಶ್ರೀ ಮುರಳಿ ಅಲಿಯಾಸ್ ಮುರಳಿಧರ್, ಬಿನ್ ಶ್ರೀ ಅಶ್ವಥನಾರಾಯಣ ರೆಡ್ಡಿ, ಆನೆಮಡಗು ವಿಲೇಜ್ ಮತ್ತು ಪೋಸ್ಟ್, ಬಸೆಟ್ಟಿಹಳ್ಳಿ ಹೋಬಳಿ, ಶಿಡ್ಲಘಟ್ಟ ತಾಲ್ಲೂಕು, ಕೋಲಾರ ಜಿಲ್ಲೆ.
2) ದಿ ಓರಿಯಂಟಲ್ ಇನ್ಸೂರೆನ್ಸ್ ಕಂಪನಿ ಲಿ., ನಂ.44/45, ಲಿಯೋ ಶಾಪಿಂಗ್ ಕಾಂಪ್ಲೆಕ್ಸ್, ರೆಸಿಡೆನ್ಸಿ ರೋಡ್ ಕ್ರಾಸ್, ಬೆಂಗಳೂರು-560001.

ಶ್ರೀಮತಿ ವೆಂಕಟಲಕ್ಷ್ಮಮ್ಮ ಕೋಂ ಮೃತ ನಾಗಪ್ಪ, ದೊಡ್ಡ ಜಾಲ ವಿಲೇಜ್, ಜಾಲಾ ಹೋಬಳಿ, ಬೆಂಗಳೂರು ಉತ್ತರ ತಾಲ್ಲೂಕು ರವರು ಈ ನ್ಯಾಯಾಲಯದಲ್ಲಿ ಒಂದು ಅರ್ಜಿ ಸಲ್ಲಿಸಿ, ತನ್ನ ಪತ್ನಿ ಶ್ರೀ ನಾಗಪ್ಪ ರವರು ಕರ್ತವ್ಯದ ಮೇಲಿದ್ದಾಗ ದಿನಾಂಕ: 26.05.2006 ರಂದು ಮೃತನಾಗಿದ್ದು, ತಾವು ಮೃತರ ಅವಲಂಬಿತರೆಂದು ತಿಳಿಸಿ, ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರನ್ವಯ ಪ್ರತಿವಾದಿಗಳಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 (ಮೂವತ್ತು) ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎನ್.ಎನ್. ಷರೀಫ್**
ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ವಿಭಾಗ-3, ಬೆಂಗಳೂರು.

ಪಿ.ಆರ್. 1063

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು**
**ಸಂಖ್ಯೆ: ಕಾಪಕಾ:ಎಫ್:ಸಿಆರ್-156:2006, ದಿನಾಂಕ: 26ನೇ ಜೂನ್ 2006**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1) ನಾಗರಾಜು ಬಿನ್ ಕರಿಬೀರಯ್ಯ,
2) ವಿಶಾಲಮ್ಮ ಕೋಂ ನಾಗರಾಜು
ಉಂಡಿಗನಾಳು ಗ್ರಾಮ, ಜಾವಗಲ್ ಹೋಬಳಿ,
ಅರಸೀಕೆರೆ ತಾಲ್ಲೂಕು.

1) ಹೆಚ್.ಟಿ. ವೆಂಕಟರಾಮು ಬಿನ್ ತೋಪೇಗೌಡ,
ಮನೆ ನಂ.317, ಕುವೆಂಪು ನಗರ, ಹಾಸನ.
2) ವ್ಯವಸ್ಥಾಪಕರು,
ದಿ. ಓರಿಯಂಟಲ್ ಇನ್ಸೂರೆನ್ಸ್ ಕಂ. ಲಿ., ಹಾಸನ.

**ಪ್ರಕಟಣೆ**

ಆನಂದ ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 19.02.2006 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರೆಂದು ಕೇಳಿಕೊಳ್ಳುವುದಾದರೆ, ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ, ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದಿದ್ದಲ್ಲಿ, ಅರ್ಜಿದಾರರನ್ನು ಹೊರತುಪಡಿಸಿ, ಮೃತರ ಅವಲಂಬಿತರು ಯಾರು ಇಲ್ಲವೆಂದು ಪರಿಗಣಿಸಿ, ಮೇಲ್ಕಂಡ ಅರ್ಜಿದಾರರ ಕ್ಲೇಮು ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಪಿ.ಆರ್. 1064 ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು.

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು**
**ಸಂಖ್ಯೆ: ಕಾಪಕಾ:ಎಫ್:ಸಿಆರ್-159:2006, ದಿನಾಂಕ: 26ನೇ ಜೂನ್ 2006**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1) ಹೆಚ್.ಬಿ. ಜಯಣ್ಣಾ ಚಾರ್ ಬಿನ್ ಲೇಟ್ ಬಸವಾಚಾರ್,
2) ಹೆಚ್.ಎ. ಮಂಗಳಗೌರಿ ಕೋಂ ಹೆಚ್.ಬಿ. ಜಯಣ್ಣಾ ಚಾರ್
3) ಹೆಚ್.ಜೆ. ಕವಿತ ಬಿನ್ ಹೆಚ್.ಬಿ. ಜಯಣ್ಣಾ ಚಾರ್
4) ಹೆಚ್.ಜೆ. ಲೋಕೇಶ ಬಿನ್ ಹೆಚ್.ಬಿ. ಜಯಣ್ಣಾ ಚಾರ್
ಎಸ್.ವಿ.ಎಸ್. ಗೌಡನ್ ಹತ್ತಿರ, ಈಡಿಗರ ಬೀದಿ,
ಹೊಳೆನರಸೀಪುರ ತಾಲ್ಲೂಕು, ಹೊಳೆನರಸೀಪುರ.

1) ಎಂ.ಜೆ. ರೇಣುಕಾಮೂರ್ತಿ ಬಿನ್ ಎಂ.ಆರ್. ಜಯಣ್ಣ
ಮನೆ ನಂ.28/5, 19ನೇ ಮೈನ್, 18ನೇ ಕ್ರಾಸ್, ಎಂ.ಸಿ. ಲೇಔಟ್, ವಿಜಯನಗರ, ಬೆಂಗಳೂರು.
2) ವ್ಯವಸ್ಥಾಪಕರು, ನ್ಯಾಷನಲ್ ಇನ್ಸೂರೆನ್ಸ್ ಕಂ. ಲಿ.,
ವಿಭಾಗೀಯ ಕಚೇರಿ 2, ಬೆಂಗಳೂರು.

**ಪ್ರಕಟಣೆ**

ಮಧುಕುಮಾರ ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 22.02.2006 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರೆಂದು ಕೇಳಿಕೊಳ್ಳುವುದಾದರೆ, ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ, ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದಿದ್ದಲ್ಲಿ, ಅರ್ಜಿದಾರರನ್ನು ಹೊರತುಪಡಿಸಿ, ಮೃತರ ಅವಲಂಬಿತರು ಯಾರು ಇಲ್ಲವೆಂದು ಪರಿಗಣಿಸಿ, ಮೇಲ್ಕಂಡ ಅರ್ಜಿದಾರರ ಕ್ಲೇಮು ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಪಿ.ಆರ್. 1065 ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು.

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು**
**ಸಂಖ್ಯೆ: ಕಾಪಕಾ:ಎಫ್:ಸಿಆರ್-165:2006, ದಿನಾಂಕ: 26ನೇ ಜೂನ್ 2006**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1) ಕೆ.ಸಿ. ಚಂದ್ರಕಲಾ ಕೋಂ ಲೇಟ್ ಎನ್.ಬಿ. ಸ್ವಾಮಿ,
2) ಎನ್.ಎಸ್. ಮನೋಜ್ ಬಿನ್ ಎನ್.ಬಿ. ಸ್ವಾಮಿ,
3) ಎನ್.ಎಸ್. ಮೌನಶ್ರೀ ಬಿನ್ ಲೇ. ಎನ್.ಬಿ. ಸ್ವಾಮಿ,
ಅಂಬೇಡ್ಕರ್‌ನಗರ, ಆಲೂರು ಟೌನ್,
ಖಾಯಂ ವಿಳಾಸ: ನಲ್ಲೂರು ಗ್ರಾಮ, ಪಾಳ್ಯ ಹೋಬಳಿ,
ಆಲೂರು ತಾಲ್ಲೂಕು.

1) ಕೃಷ್ಣಶೆಟ್ಟಿ ಬಿನ್ ವೆಂಕಟಶೆಟ್ಟಿ,
ನವಿಲಹಳ್ಳಿ ಗ್ರಾಮ, ಮಗ್ಗೆ ಅಂಚೆ, ಕೆ. ಹೊಸಕೋಟೆ ಹೋಬಳಿ, ಆಲೂರು ತಾಲ್ಲೂಕು, ಹಾಸನ.
2) ನ್ಯಾಷನಲ್ ಇನ್ಸೂರೆನ್ಸ್ ಕಂಪನಿ ಲಿ., ಬ್ರಾಂಚ್ ಆಫೀಸ್,
ಹಾಸನ.

**ಪ್ರಕಟಣೆ**

ಎನ್.ಬಿ. ಸ್ವಾಮಿ ಉರುಫ್ ಅಪ್ಪಣ್ಣೆ ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 10.12.2005 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರೆಂದು ಕೇಳಿಕೊಳ್ಳುವುದಾದರೆ, ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ, ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು.

ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದಿದ್ದಲ್ಲಿ, ಅರ್ಜಿದಾರರನ್ನು ಹೊರತುಪಡಿಸಿ, ಮೃತರ ಅವಲಂಬಿತರು ಯಾರು ಇಲ್ಲವೆಂದು ಪರಿಗಣಿಸಿ, ಮೇಲ್ಕಂಡ ಅರ್ಜಿದಾರರ ಕ್ಲೇಮು ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು.

ಪಿ.ಆರ್. 1066

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು**

**ಸಂಖ್ಯೆ: ಕಾಪಕಾ:ಎಫ್:ಸಿಆರ್-157:2006, ದಿನಾಂಕ: 12ನೇ ಜುಲೈ 2006**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1) ಗೌರಮ್ಮ ಕೋಂ ಪ್ರತಿ ಪಿ.
2) ಧರ್ಮರಾಜ್ ಬಿನ್ ಪ್ರತಿ ಪಿ.
3) ಪರಮೇಶ ಬಿನ್ ಪ್ರತಿ ಪಿ.
4) ರಾಜು ಬಿನ್ ಕೆಂಪಯ್ಯ,
5) ಪಾರ್ವತಮ್ಮ ಕೋಂ ರಾಜು
ಕೆಂದಿನ್ನೆ ಕಾವಲ, ಮೊಸರಂಗಾಲ ಪೋಸ್ಟ್, ಮಲ್ಲಿಪಟ್ಟಣ ಹೋ.
ಅರಕಲಗೂಡು ತಾಲ್ಲೂಕು.

1) ಕೆ.ಸಿ. ಯೋಗೀಶ್ ಬಿನ್ ಚನ್ನಯ್ಯ,
ಕೆಂದಿನ್ನೆ ಕಾವಲ, ಮೊಸರಂಗಾಲ ಪೋಸ್ಟ್, ಮಲ್ಲಿಪಟ್ಟಣ ಹೋಬಳಿ, ಅರಕಲಗೂಡು ತಾಲ್ಲೂಕು
2) ಡಿವಿಷನಲ್ ಆಫೀಸ್,
ಓರಿಯಂಟಲ್ ಇನ್ಶೂರೆನ್ಸ್ ಕಂ. ಲಿ., ಬಿ.ಎಂ. ರಸ್ತೆ,
ಹಾಸನ.

**ಪ್ರಕಟಣೆ**

ಪ್ರತಿ ಪಿ. ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 02.03.2006 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರೆಂದು ಕೇಳಿಕೊಳ್ಳುವುದಾದರೆ, ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ, ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದಿದ್ದಲ್ಲಿ, ಅರ್ಜಿದಾರರನ್ನು ಹೊರತುಪಡಿಸಿ, ಮೃತರ ಅವಲಂಬಿತರು ಯಾರು ಇಲ್ಲವೆಂದು ಪರಿಗಣಿಸಿ, ಮೇಲ್ಕಂಡ ಅರ್ಜಿದಾರರ ಕ್ಲೇಮು ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು.

ಪಿ.ಆರ್. 1080

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು**

**ಸಂಖ್ಯೆ: ಕಾಪಕಾ:ಎಫ್:ಸಿಆರ್-173:2006, ದಿನಾಂಕ: 12ನೇ ಜುಲೈ 2006**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1) ಜಯಣ್ಣಾಚಾರ್ ಬಿನ್ ಬಸವಾಚಾರ್
2) ಮಂಗಳ ಗೌರಿ ಕೋಂ ಜಯಣಾಚಾರ್
3) ಹೆಚ್.ಜೆ. ಕವಿತ ಬಿನ್ ಜಯಣಾಚಾರ್
4) ಲೋಕೇಶ್ ಹೆಚ್.ಜೆ. ಬಿನ್ ಜಯಣ್ಣಾಚಾರ್
ಈಡಿಗರ ಬೀದಿ, ಹೊಳೆನರಸೀಪುರ, ಹಾಸನ.

1) ಎಂ.ಜೆ. ರೇಣುಕಾಮೂರ್ತಿ ಬಿನ್ ಜಯಣ್ಣ
ಮನೆ ನಂ.28/5, 19ನೇ ಕ್ರಾಸ್, ಎಂ.ಸಿ. ಲೇಔಟ್,
ವಿಜಯನಗರ, ಬೆಂಗಳೂರು.
2) ವ್ಯವಸ್ಥಾಪಕರು, ನ್ಯಾಷನಲ್ ಇನ್ಶೂರೆನ್ಸ್ ಕಂ. ಲಿ.,
ಲಾಲ್‌ಬಾಗ್ ವಿಷನ್‌ರೋಡ್, ಬೆಂಗಳೂರು.

**ಪ್ರಕಟಣೆ**

ಮಧುಕುಮಾರ ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 22.02.2006 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರೆಂದು ಕೇಳಿಕೊಳ್ಳುವುದಾದರೆ, ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ, ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದಿದ್ದಲ್ಲಿ, ಅರ್ಜಿದಾರರನ್ನು ಹೊರತುಪಡಿಸಿ, ಮೃತರ ಅವಲಂಬಿತರು ಯಾರು ಇಲ್ಲವೆಂದು ಪರಿಗಣಿಸಿ, ಮೇಲ್ಕಂಡ ಅರ್ಜಿದಾರರ ಕ್ಲೇಮು ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು.

ಪಿ.ಆರ್. 1081

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು**

**ಸಂಖ್ಯೆ: ಕಾಪಕಾ:ಎಫ್:ಸಿಆರ್-174:2006, ದಿನಾಂಕ: 12ನೇ ಜುಲೈ 2006**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1) ಶ್ರೀಮತಿ ನೀಲಾ ಕೋಂ ಮಹೇಶ
2) ಕುಮಾರಿ ಅರ್ಪಿತ ಬಿನ್ ಮಹೇಶ
3) ಹರ್ಷಿತ ಬಿನ್ ಮಹೇಶ
4) ಕೆಂಚಯ್ಯ ಬಿನ್ ಕೆಂಚಯ್ಯ 5) ಸಿದ್ದಮ್ಮ ಕೋಂ ಕೆಂಚಯ್ಯ

1) ಅಬ್ದುಲ್ ರಹಮಾನ್ ಬಿನ್ ಇಬ್ರಾಹಿಂ ಮಾಸ್ತರ್
ಕಂಟ್ರಾಕ್ಟರ್, ಶುಂಠಿಕೊಪ್ಪ ಗ್ರಾಮ, ಮಡಿಕೇರಿ.
2) ಮೆ: ಖೋಡೆ ಬ್ರದರ್ಸ್, ಕೃಷ್ಣಗಿರಿ ಎಸ್ಟೇಟ್, ಬಿಸಗ್ನಿ ಮಠ
ಅಂಚೆ, ಚಿಕ್ಕಮಗಳೂರು.

**ಪ್ರಕಟಣೆ**

ಮಹೇಶ ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 27.12.2005 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರೆಂದು ಕೇಳಿಕೊಳ್ಳುವುದಾದರೆ, ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ, ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದಿದ್ದಲ್ಲಿ, ಅರ್ಜಿದಾರರನ್ನು ಹೊರತುಪಡಿಸಿ, ಮೃತರ ಅವಲಂಬಿತರು ಯಾರು ಇಲ್ಲವೆಂದು ಪರಿಗಣಿಸಿ, ಮೇಲ್ಕಂಡ ಅರ್ಜಿದಾರರ ಕ್ಲೇಮು ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಪಿ.ಆರ್. 1082 ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು.

## ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

**ವಿಷಯ:** ಸಮಾಪನೆಗೊಂಡ ಮಂಜುನಾಥನಗರ ಹಾಲು ಉತ್ಪಾದಕರ ಸಹಕಾರ ಸಂಘ ನಿ., ರಾಮನಗರ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:**
1) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ/ಆರ್/ಸಮಾಪನೆ/148/2004-05, ದಿನಾಂಕ: 21.1.2005.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು ರಾಮನಗರ ರವರ ಪತ್ರ ಸಂಖ್ಯೆ: ಸಸಸನಿರಾ-46/ಸಮಾಪನೆ/34/2004-05, ದಿನಾಂಕ: 25.04.2006.
3) ಸಮಾಪನಾಧಿಕಾರಿಯವರ ಪ್ರಸ್ತಾವೆ ದಿನಾಂಕ: 17.4.2005.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು ರಾಮನಗರ ರವರ ಕಛೇರಿಯಲ್ಲಿ ಮಂಜುನಾಥನಗರ ಹಾಲು ಉತ್ಪಾದಕರ ಸಹಕಾರ ಸಂಘ ನಿ, ರಾಮನಗರ ತಾಲ್ಲೂಕು ಈ ಸಂಘವು ಸಂಖ್ಯೆ: ಸಸಸನಿರಾ-46/ಸಾಮಾನ್ಯ ನೋಂದಣಿ/3444/2003-04, ದಿನಾಂಕ: 15.03.2004 ರಂತೆ ನೋಂದಣಿಯಾಗಿರುತ್ತದೆ. ಸದರಿ ಸಂಘವು ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿರುವುದರಿಂದ ಉಲ್ಲೇಖ (1)ರ ಪತ್ರದಲ್ಲಿ ಸದರಿ ಸಂಘವನ್ನು ಸಮಾಪನೆಗೊಳಿಸಲಾಗಿದ್ದು, ಅದರಂತೆ ಉಲ್ಲೇಖ (2) ಮತ್ತು (3) ರ ಸಮಾಪನಾಧಿಕಾರಿಗಳ ಪತ್ರದಲ್ಲಿ ಸದರಿ ಸಂಘದ ನೋಂದಣಿ ರದ್ದುಪಡಿಸಲು ತಿಳಿಸಿರುತ್ತಾರೆ.

ಆದ್ದರಿಂದ ಈ ಸಂಘವನ್ನು ಮುಂದುವರಿಸಿದರೆ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನವಿಲ್ಲದ ಕಾರಣ ಸದರಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಉಲ್ಲೇಖ (2) ಮತ್ತು (3)ರ ಪತ್ರದಲ್ಲಿ ತಿಳಿಸಿರುವ ಮೇರೆಗೆ ಮಂಜುನಾಥನಗರ ಹಾಲು ಉತ್ಪಾದಕರ ಸಹಕಾರ ಸಂಘ ನಿ., ರಾಮನಗರ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ ರದ್ದುಪಡಿಸಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

**ಆದೇಶ ಸಂಖ್ಯೆ: ಡಿಆರ್‌ಬಿ/ಆರ್/ನೋಂದಣಿ ರದ್ದತಿ/53/2006-07, ದಿನಾಂಕ: 24ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 69/ಸಿಎಲ್ಎಂ/2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಬಿ.ಎಸ್. ಹರೀಶ್, ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಮಂಜುನಾಥನಗರ ಹಾಲು ಉತ್ಪಾದಕರ ಸಹಕಾರ ಸಂಘ ನಿ., ರಾಮನಗರ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ: ಸಂ:ಸಸಸನಿರಾ-46/ಸಾಮಾನ್ಯ ನೋಂದಣಿ/3444/2003-04, ದಿನಾಂಕ: 15.3.2004ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 24.6.2006 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ಪಿ.ಆರ್. 1078 ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರು–1,ಬೆಂಗಳೂರು ನಗರ ಜಿಲ್ಲೆ, ನಂ.146, 3ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ,ಬೆಂಗಳೂರು–03 ಇವರ ನಡವಳಿಗಳು.

**ಕ್ರಮಾಂಕ:ಡಿಆರ್‌ಬಿ–1:ಸಮಾಪನೆ:15:2006–07, ದಿನಾಂಕ: 30ನೇ ಜೂನ್ 2006**

**ವಿಷಯ:** ಸ್ಥಗಿತಗೊಂಡಿರುವ ಭೀಮಜ್ಯೋತಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ಭೀಮಜ್ಯೋತಿನಗರ, ನಂ.5, ಎಲ್.ಐ.ಸಿ.ಕಾಲೋನಿ, ಪಶ್ಚಿಮ ಕಾರ್ಡ್ ರಸ್ತೆ. ಬೆಂಗಳೂರು, ಈ ಸಹಕಾರ ಸಂಘವನ್ನು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:**
1) ಸ.ಸಂ.ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಇವರ ಪ್ರಕಟಣೆ ಕ್ರಮಾಂಕ:ಜೆಆರ್‌ಬಿ/ಎಲ್‌ಕ್ಯೂಡಿ/06/ಎಲ್ಎಂ.ಸಿ/2004–05 ದಿನಾಂಕ:22–12–2004.
2) ಈ ಕಛೇರಿಯ ಇದೇ ಕ್ರಮಾಂಕದ ದಿನಾಂಕ: 24–05–2006ರ ನೋಟೀಸು.

**ಪ್ರಸ್ತಾವನೆ:**

ಭೀಮಜ್ಯೋತಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ಭೀಮಜ್ಯೋತಿನಗರ, ನಂ.5, ಎಲ್.ಐ.ಸಿ.ಕಾಲೋನಿ, ಪಶ್ಚಿಮ ಕಾರ್ಡ್ ರಸ್ತೆ. ಬೆಂಗಳೂರು,ಈ ಸಹಕಾರ ಸಂಘವು ತನ್ನ ಕಾರ್ಯಚಟುವಟಿಕೆಗಳನ್ನು ನಿರ್ವಹಿಸದೇ ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುವುದಾಗಿಯೂ ಹಾಗೂ ಸದರೀ ಸಹಕಾರ ಸಂಘವು ನೊಂದಣಿಯಾದ ವಿಳಾಸದಲ್ಲಿ ಕರ್ತವ್ಯ ನಿರ್ವಹಿಸದೇ

ಇರುವುದಾಗಿಯೂ ಈ ಕಛೇರಿಯ ಗಮನಕ್ಕೆ ತರಲಾಗಿತ್ತು. ಆದ್ದರಿಂದ ಈ ಸಹಕಾರ ಸಂಘವನ್ನು ಮುಂದುವರಿಸುವುದು ಸೂಕ್ತವಲ್ಲವೆಂದು ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು ಇವರು ಉಲ್ಲೇಖ (1)ರಲ್ಲಿ ಕಾಣಿಸಿರುವ ದಿನಾಂಕ:22-12-2004ರ ಪ್ರಕಟಣೆಯ ರೀತ್ಯಾ ಮೇಲ್ಕಂಡ ಸಹಕಾರ ಸಂಘದ ಹೆಸರನ್ನು ದಿನಾಂಕ:2-3-2005ರ "ಸಂಜೆವಾಣಿ" ಕನ್ನಡ ದಿನಪತ್ರಿಕೆಯಲ್ಲಿ ಪ್ರಕಟಿಸಿ, ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಸಂಘದ ಸದಸ್ಯರಾಗಲೀ, ಸಂಘದ ಆಡಳಿತ ಮಂಡಳಿಯ ಸದಸ್ಯರಾಗಲೀ, ಸಾರ್ವಜನಿಕರಾಗಲೀ ಅಥವಾ ಹಣಕಾಸು ಸಂಸ್ಥೆಗಳಾಗಲೀ ಏನಾದರೂ ಆಕ್ಷೇಪಣೆ ಗಳಿದ್ದಲ್ಲಿ, ಪತ್ರಿಕಾ ಪ್ರಕಟಣೆ ಹೊರಡಿಸಿದ 15 ದಿನಗಳೊಳಗಾಗಿ ಆಕ್ಷೇಪಣೆಯನ್ನು ಸಮರ್ಥಿಸುವ ದಾಖಲಾತಿ ಗಳೊಂದಿಗೆ ಸಲ್ಲಿಸುವಂತೆ ಸೂಚಿಸಲಾಗಿತ್ತು. ಆದರೆ, ಮೇಲ್ಕಂಡ ಸಹಕಾರ ಸಂಘದ ಅಸ್ಥಿತ್ವದ ಬಗ್ಗೆಯಾಗಲೀ, ಇದನ್ನು ಮುಂದುವರಿಸಿಕೊಂಡು ಹೋಗುವ ಅವಶ್ಯಕತೆಯ ಬಗ್ಗೆಯಾಗಲೀ ಸಂಘದ ಆಡಳಿತ ಮಂಡಳಿಯ ಸದಸ್ಯರಿಂದಾಗಲೀ, ಸಂಘದ ಸದಸ್ಯರಿಂದಾಗಲೀ ಅಥವಾ ಸಾರ್ವಜನಿಕ ರಿಂದಾಗಲೀ, ಈವರೆಗೆ ಯಾವುದೇ ಅರ್ಜಿ ಸ್ವೀಕೃತವಾಗಿರುವುದಿಲ್ಲ.

ಆದರೂ ಮೇಲ್ಕಂಡ ಸಹಕಾರ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಮೊದಲು ಸ್ವಾಭಾವಿಕ ನ್ಯಾಯ ತತ್ವಗಳನ್ವಯ ಸಂಬಂಧಪಟ್ಟವರಿಗೆ ಅವರ ಅಹವಾಲು ಏನಾದರೂ ಇದ್ದಲ್ಲಿ ಸಲ್ಲಿಸಲು ಮತ್ತೊಂದು ಅವಕಾಶ ನೀಡುವುದು ಸೂಕ್ತವೆಂದು ತೀರ್ಮಾನಿಸಿ ಮೇಲ್ಕಂಡ
ಸಹಕಾರ ಸಂಘದ ಅಧ್ಯಕ್ಷರು/ ಕಾರ್ಯದರ್ಶಿಯವರಿಗೆ ಈ ಕಛೇರಿಯಿಂದ ನೀಡಲಾಗಿರುವ ಉಲ್ಲೇಖ(2)ರಲ್ಲಿ ಕಾಣಿಸಿರುವ ದಿನಾಂಕ:24-05-2006ರ ನೋಟೀಸಿನಲ್ಲಿ ಸದರೀ ಸಹಕಾರ ಸಂಘವನ್ನು

1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72ರನ್ವಯ ಸಮಾಪನೆಗೊಳಿಸಿ, ಸಂಘದ ನೊಂದಣಿ ಯನ್ನು ಏಕೆ ರದ್ದುಗೊಳಿಸಬಾರದು ಎಂಬ ಬಗ್ಗೆ ಅವರ ವಿವರಣೆ ಏನಾದರೂ ಇದ್ದಲ್ಲಿ ಸದರೀ ನೋಟೀಸು ತಲುಪಿದ ಏಳು (7) ದಿನಗಳೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು. ತಪ್ಪಿದಲ್ಲಿ ಸದರೀ ಸಹಕಾರ ಸಂಘವನ್ನು ಸಮಾಪನೆಗೊಳಿಸಲು ಸಂಘದ ನೊಂದಣಿಯನ್ನು ರದ್ದುಪಡಿಸಲು ಸದರಿಯವರ ಆಕ್ಷೇಪಣೆ ಏನೂ ಇಲ್ಲವೆಂದು ಪರಿಗಣಿಸಿ, ಈ ಬಗ್ಗೆ ನಿಯಮಾನುಸಾರ ಮುಂದಿನ ಸೂಕ್ತ ಕ್ರಮ ಕೈಗೊಳ್ಳಲಾಗುವುದು ಎಂದು ಸಹ ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ಸದರೀ ಸಂಘದ ಇತ್ತೀಚಿನ ಲಭ್ಯವಿರುವ ನೋಟೀಸಿಗೆ ಅಂಚೆ ನೊಂದಣಿ ಮೂಲಕ ಕಳುಹಿಸಲಾಗಿತ್ತು. ಆದರೆ ಸದರೀ ನೋಟೀಸು ಸಂಘದಿಂದ ಸ್ವೀಕೃತಗೊಳ್ಳದೆ ಅಂಚೆ ಇಲಾಖೆಯಿಂದ ಹಿಂದಿರುಗಿಸಲ್ಪಟ್ಟಿದೆ.

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮೇಲ್ಕಂಡ ಸಹಕಾರ ಸಂಘವನ್ನು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(2)ರನ್ವಯ ಸಮಾಪನೆಗೊಳಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡುವುದು ಮಾತ್ರವಲ್ಲದೆ, ಸಂಘದ ನೊಂದಣಿಯನ್ನು ರದ್ದುಪಡಿಸುವುದು ಸೂಕ್ತವೆಂದು ತೀರ್ಮಾನಿಸಿದೆ.

ಅದರಂತೆ ಈ ಕೆಳಕಂಡ ಆದೇಶ.

**ಆದೇಶ**

1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(2)ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ:ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ:21-11-2001ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಟಿ.ವಿ.ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ಭೀಮಜ್ಯೋತಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ಭೀಮಜ್ಯೋತಿನಗರ, ನಂ.5, ಎಲ್.ಐ.ಸಿ.ಕಾಲೋನಿ, ಪಶ್ಚಿಮ ಕಾರ್ಡ್ ರಸ್ತೆ. ಬೆಂಗಳೂರು, ಈ ಸಹಕಾರ ಸಂಘವನ್ನು ಕೂಡಲೇ ಜಾರಿಗೆ ಬರುವಂತೆ ಸಮಾಪನೆಗೊಳಿಸಿ ಈ ಮೂಲಕ ಆದೇಶಿಸಿರುತ್ತೇನೆ. ಹಾಗೂ ಸಹಕಾರ ಸಂಘಗಳ ಕಾಯಿದೆಯ ಕಲಂ 73 ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು ಇವರನ್ನು ಸದರಿ ಸಂಘದ ಸಮಾಪನಾಧಿಕಾರಿಯನ್ನಾಗಿ ಹೆಚ್ಚುವರಿ ಪ್ರಭಾರದಲ್ಲಿ ನೇಮಕ ಮಾಡಿ ಈ ಮೂಲಕ ಆದೇಶಿಸಿರುತ್ತೇನೆ. ಸಮಾಪನಾಧಿಕಾರಿಯವರು ಮೇಲ್ಕಂಡ ಸಹಕಾರ ಸಂಘದ ಪ್ರಭಾರವನ್ನು ಕೂಡಲೇ ವಹಿಸಿಕೊಂಡು, ಸಂಘದ ಸಮಾಪನಾ ಕಾರ್ಯವನ್ನು ತೀವ್ರಗತಿಯಲ್ಲಿ ಮುಗಿಸಿ, ಸಂಘದ ನೊಂದಣಿಯನ್ನು ರದ್ದುಪಡಿಸಲು ಆದಷ್ಟು ಬೇಗ ಪ್ರಸ್ತಾವೆಯನ್ನು ಈ ಕಛೇರಿಗೆ ಸಲ್ಲಿಸುವಂತೆ ಈ ಮೂಲಕ ಆದೇಶಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 30.6.2006 ರಂದು ನೀಡಿರುತ್ತೇನೆ.

**ಟಿ.ವಿ. ನರಸಿಂಹಮೂರ್ತಿ**

ಪಿ.ಆರ್. 1041 ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು-1,ಬೆಂಗಳೂರು ನಗರ ಜಿಲ್ಲೆ, ನಂ.146, 3ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ,ಬೆಂಗಳೂರು-03 ಇವರ ನಡವಳಿಗಳು.**

**ಕ್ರಮಾಂಕ:ಡಿಆರ್‌ಬಿ-1:ಸಮಾಪನೆ:17:2006-07, ದಿನಾಂಕ: 5ನೇ ಜುಲೈ 2006**

**ವಿಷಯ:** ಸ್ಥಗಿತಗೊಂಡಿರುವ ಗಾಯತ್ರಿನಗರ ಗೃಹ ನಿರ್ಮಾಣ ಸಹಕಾರ ಸಂಘ ನಿ., ನಂ.125, 15ನೇ ಕ್ರಾಸ್, 2ನೇ ಹಂತ, ಮಹಾಲಕ್ಷ್ಮಿ ಬಡಾವಣೆ, ಬೆಂಗಳೂರು, ಈ ಸಹಕಾರ ಸಂಘವನ್ನು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72ರನ್ವಯ ಸಮಾಪನೆ ಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸ.ಸಂ.ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಇವರ ಪ್ರಕಟಣೆ ಕ್ರಮಾಂಕ: ಜೆಆರ್‌ಬಿ/ಎಲ್‌ಕ್ಯೂಡಿ/06/ಎಲ್‌ಎಂ.ಸಿ/2004-05 ದಿನಾಂಕ: 22-12-2004.

2) ಈ ಕಛೇರಿಯ ಇದೇ ಕ್ರಮಾಂಕದ ದಿನಾಂಕ:24-05-2006ರ ನೋಟೀಸು.

**ಪ್ರಸ್ತಾವನೆ:**

ಗಾಯತ್ರಿನಗರ ಗೃಹ ನಿರ್ಮಾಣ ಸಹಕಾರ ಸಂಘ ನಿ., ನಂ.125, 15ನೇ ಕ್ರಾಸ್, 2ನೇ ಹಂತ, ಮಹಾಲಕ್ಷ್ಮಿ ಬಡಾವಣೆ, ಬೆಂಗಳೂರು, ಈ ಸಹಕಾರ ಸಂಘವು ತನ್ನ ಕಾರ್ಯಚಟುವಟಿಕೆಗಳನ್ನು ನಿರ್ವಹಿಸದೇ ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುವುದಾಗಿಯೂ ಹಾಗೂ ಸದರೀ ಸಹಕಾರ ಸಂಘವು ನೊಂದಣಿಯಾದ ವಿಳಾಸದಲ್ಲಿ ಕರ್ತವ್ಯ ನಿರ್ವಹಿಸದೇ ಇರುವುದಾಗಿಯೂ ಈ ಕಛೇರಿಯ ಗಮನಕ್ಕೆ ತರಲಾಗಿತ್ತು. ಆದ್ದರಿಂದ ಈ ಸಹಕಾರ ಸಂಘವನ್ನು ಮುಂದುವರಿಸುವುದು ಸೂಕ್ತವಲ್ಲವೆಂದು ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು ಇವರು ಉಲ್ಲೇಖ (1)ರಲ್ಲಿ ಕಾಣಿಸಿರುವ ದಿನಾಂಕ:22-12-2004ರ ಪ್ರಕಟಣೆಯ ರೀತ್ಯಾ ಮೇಲ್ಕಂಡ ಸಹಕಾರ ಸಂಘದ ಹೆಸರನ್ನು ದಿನಾಂಕ:2-3-2005ರ "ಸಂಜೆವಾಣಿ" ಕನ್ನಡ ದಿನಪತ್ರಿಕೆಯಲ್ಲಿ ಪ್ರಕಟಿಸಿ, ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಸಂಘದ ಸದಸ್ಯರಾಗಲೀ, ಸಂಘದ ಆಡಳಿತ ಮಂಡಳಿಯ ಸದಸ್ಯರಾಗಲೀ, ಸಾರ್ವಜನಿಕರಾಗಲೀ ಅಥವಾ ಹಣಕಾಸು ಸಂಸ್ಥೆಗಳಾಗಲೀ ಏನಾದರೂ ಆಕ್ಷೇಪಣೆ ಗಳಿದ್ದಲ್ಲಿ, ಪತ್ರಿಕಾ ಪ್ರಕಟಣೆ ಹೊರಡಿಸಿದ 15 ದಿನಗಳೊಳಗಾಗಿ ಆಕ್ಷೇಪಣೆಯನ್ನು ಸಮರ್ಥಿಸುವ ದಾಖಲಾತಿ ಗಳೊಂದಿಗೆ ಸಲ್ಲಿಸುವಂತೆ ಸೂಚಿಸಲಾಗಿತ್ತು. ಆದರೆ, ಮೇಲ್ಕಂಡ ಸಹಕಾರ ಸಂಘದ ಅಸ್ಥಿತ್ವದ ಬಗ್ಗೆಯಾಗಲೀ, ಇದನ್ನು ಮುಂದುವರಿಸಿಕೊಂಡು ಹೋಗುವ ಅವಶ್ಯಕತೆಯ ಬಗ್ಗೆಯಾಗಲೀ ಸಂಘದ ಆಡಳಿತ ಮಂಡಳಿಯ ಸದಸ್ಯರಿಂದಾಗಲೀ, ಸಂಘದ ಸದಸ್ಯರಿಂದಾಗಲೀ ಅಥವಾ ಸಾರ್ವಜನಿಕ ರಿಂದಾಗಲೀ, ಈವರೆಗೆ ಯಾವುದೇ ಅರ್ಜಿ ಸ್ವೀಕೃತವಾಗಿರುವುದಿಲ್ಲ.

ಆದರೂ ಮೇಲ್ಕಂಡ ಸಹಕಾರ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಮೊದಲು ಸ್ವಾಭಾವಿಕ ನ್ಯಾಯ ತತ್ವಗಳನ್ವಯ ಸಂಬಂಧಪಟ್ಟವರಿಗೆ ಅವರ ಅಹವಾಲು ಏನಾದರೂ ಇದ್ದಲ್ಲಿ ಸಲ್ಲಿಸಲು ಮತ್ತೊಂದು ಅವಕಾಶ ನೀಡುವುದು ಸೂಕ್ತವೆಂದು ತೀರ್ಮಾನಿಸಿ ಮೇಲ್ಕಂಡ ಸಹಕಾರ ಸಂಘದ ಅಧ್ಯಕ್ಷರು/ಕಾರ್ಯದರ್ಶಿಯವರಿಗೆ ಈ ಕಛೇರಿಯಿಂದ ನೀಡಲಾಗಿರುವ ಉಲ್ಲೇಖ(2) ರಲ್ಲಿ ಕಾಣಿಸಿರುವ ದಿನಾಂಕ:24-05-2006ರ ನೋಟೀಸಿನಲ್ಲಿ ಸದರೀ ಸಹಕಾರ ಸಂಘವನ್ನು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72ರನ್ವಯ ಸಮಾಪನೆಗೊಳಿಸಿ, ಸಂಘದ ನೊಂದಣಿ ಯನ್ನು ಏಕೆ ರದ್ದುಗೊಳಿಸಬಾರದು ಎಂಬ ಬಗ್ಗೆ ಅವರ ವಿವರಣೆ ಏನಾದರೂ ಇದ್ದಲ್ಲಿ ಸದರೀ ನೋಟೀಸು ತಲುಪಿದ ಏಳು (7) ದಿನಗಳೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು. ತಪ್ಪಿದಲ್ಲಿ ಸದರೀ ಸಹಕಾರ ಸಂಘವನ್ನು ಸಮಾಪನೆಗೊಳಿಸಲು ಸಂಘದ ನೊಂದಣಿಯನ್ನು ರದ್ದುಪಡಿಸಲು ಸದರಿಯವರ ಆಕ್ಷೇಪಣೆ ಏನೂ ಇಲ್ಲವೆಂದು ಪರಿಗಣಿಸಿ, ಈ ಬಗ್ಗೆ ನಿಯಮಾನುಸಾರ ಮುಂದಿನ ಸೂಕ್ತ ಕ್ರಮ ಕೈಗೊಳ್ಳಲಾಗುವುದು ಎಂದು ಸಹ ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ಸದರೀ ಸಂಘದ ಇತ್ತೀಚಿನ ಲಭ್ಯವಿರುವ ನೋಟೀಸಿಗೆ ಅಂಚೆ ನೊಂದಣಿ ಮೂಲಕ ಕಳುಹಿಸಲಾಗಿತ್ತು. ಆದರೆ ಸದರೀ ನೋಟೀಸು ಸಂಘದಿಂದ ಸ್ವೀಕೃತಗೊಳ್ಳದೆ ಅಂಚೆ ಇಲಾಖೆಯಿಂದ ಹಿಂದಿರುಗಿಸಲ್ಪಟ್ಟಿದೆ.

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮೇಲ್ಕಂಡ ಸಹಕಾರ ಸಂಘವನ್ನು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(2)ರನ್ವಯ ಸಮಾಪನೆಗೊಳಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡುವುದು ಮಾತ್ರವಲ್ಲದೆ, ಸಂಘದ ನೊಂದಣಿಯನ್ನು ರದ್ದುಪಡಿಸುವುದು ಸೂಕ್ತವೆಂದು ತೀರ್ಮಾನಿಸಿದೆ.

ಅದರಂತೆ ಈ ಕೆಳಕಂಡ ಆದೇಶ.

## ಆದೇಶ

1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(2)ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ:ಸಿಎಂಡಬ್ಲ್ಯೂ/69/ಸಿಎಲ್‌ಎಂ/2001 ದಿನಾಂಕ:21-11-2001ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಟಿ.ವಿ.ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ಗಾಯತ್ರಿನಗರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ನಂ.125, 15ನೇ ಕ್ರಾಸ್, 2ನೇ ಹಂತ, ಮಹಾಲಕ್ಷ್ಮಿ ಬಡಾವಣೆ, ಬೆಂಗಳೂರು, ಈ ಸಹಕಾರ ಸಂಘವನ್ನು ಕೂಡಲೇ ಜಾರಿಗೆ ಬರುವಂತೆ ಸಮಾಪನೆಗೊಳಿಸಿ ಈ ಮೂಲಕ ಆದೇಶಿಸಿರುತ್ತೇನೆ. ಹಾಗೂ ಸಹಕಾರ ಸಂಘಗಳ ಕಾಯಿದೆಯ ಕಲಂ 73 ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು ಇವರನ್ನು ಸದರಿ ಸಂಘದ ಸಮಾಪನಾಧಿಕಾರಿಯನ್ನಾಗಿ ಹೆಚ್ಚುವರಿ ಪ್ರಭಾರದಲ್ಲಿ ನೇಮಕ ಮಾಡಿ ಈ ಮೂಲಕ ಆದೇಶಿಸಿರುತ್ತೇನೆ. ಸಮಾಪನಾಧಿಕಾರಿಯವರು ಮೇಲ್ಕಂಡ ಸಹಕಾರ ಸಂಘದ ಪ್ರಭಾರವನ್ನು ಕೂಡಲೇ ವಹಿಸಿಕೊಂಡು, ಸಂಘದ ಸಮಾಪನಾ ಕಾರ್ಯವನ್ನು ತೀವ್ರಗತಿಯಲ್ಲಿ ಮುಗಿಸಿ, ಸಂಘದ ನೊಂದಣಿಯನ್ನು ರದ್ದುಪಡಿಸಲು ಆದಷ್ಟು ಬೇಗ ಪ್ರಸ್ತಾವೆಯನ್ನು ಈ ಕಛೇರಿಗೆ ಸಲ್ಲಿಸುವಂತೆ ಈ ಮೂಲಕ ಆದೇಶಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 5.7.2006 ರಂದು ನೀಡಿರುತ್ತೇನೆ.

**ಟಿ.ವಿ. ನರಸಿಂಹಮೂರ್ತಿ**

ಪಿ.ಆರ್. 1076 ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು-1,ಬೆಂಗಳೂರು ನಗರ ಜಿಲ್ಲೆ, ನಂ.146, 3ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ,ಬೆಂಗಳೂರು-03 ಇವರ ನಡವಳಿಗಳು.**

**ಕ್ರಮಾಂಕ:ಡಿಆರ್‌ಬಿ-1:ಸಮಾಪನೆ:27:2006-07 ದಿನಾಂಕ: 5ನೇ ಜುಲೈ 2006.**

**ವಿಷಯ:** ಸ್ಥಗಿತಗೊಂಡಿರುವ ಮೈಸೂರು ಎಲೆಕ್ಟ್ರೋ ಕೆಮಿಕಲ್ಸ್ ಇಂಜಿನಿಯರಿಂಗ್ ಸಹಕಾರ ಸಂಘ ನಿ., ಇಂಡಸ್ಟ್ರಿಯಲ್ ಟೌನ್, ಬೆಂಗಳೂರು ಈ ಸಹಕಾರ ಸಂಘವನ್ನು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72ರನ್ವಯ ಸಮಾಪನೆ ಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸ.ಸಂ.ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಇವರ ಪ್ರಕಟಣೆ ಕ್ರಮಾಂಕ:ಜೆಆರ್‌ಬಿ/ಎಲ್‌ಕ್ಯೂಡಿ/06/ಎಲ್‌ಎಂ.ಸಿ/2004-05 ದಿನಾಂಕ:22-12-2004.

2) ಈ ಕಛೇರಿಯ ಇದೇ ಕ್ರಮಾಂಕದ ದಿನಾಂಕ:24-05-2006ರ ನೋಟೀಸು.

**ಪ್ರಸ್ತಾವನೆ:**

ಮೈಸೂರು ಎಲೆಕ್ಟ್ರೋ ಕೆಮಿಕಲ್ಸ್ ಇಂಜಿನಿಯರಿಂಗ್ ಸಹಕಾರ ಸಂಘ ನಿ., ಇಂಡಸ್ಟ್ರಿಯಲ್ ಟೌನ್, ಬೆಂಗಳೂರು, ಈ ಸಹಕಾರ ಸಂಘವು ತನ್ನ ಕಾರ್ಯಚಟುವಟಿಕೆಗಳನ್ನು ನಿರ್ವಹಿಸದೇ ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುವುದಾಗಿಯೂ ಹಾಗೂ ಸದರೀ ಸಹಕಾರ ಸಂಘವು ನೊಂದಣಿಯಾದ ವಿಳಾಸದಲ್ಲಿ ಕರ್ತವ್ಯ ನಿರ್ವಹಿಸದೇ ಇರುವುದಾಗಿಯೂ ಈ ಕಛೇರಿಯ ಗಮನಕ್ಕೆ ತರಲಾಗಿತ್ತು. ಆದ್ದರಿಂದ ಈ ಸಹಕಾರ ಸಂಘವನ್ನು ಮುಂದುವರಿಸುವುದು ಸೂಕ್ತವಲ್ಲವೆಂದು ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು ಇವರು ಉಲ್ಲೇಖ (1)ರಲ್ಲಿ ಕಾಣಿಸಿರುವ ದಿನಾಂಕ:22-12-2004ರ ಪ್ರಕಟಣೆಯ ರೀತ್ಯಾ ಮೇಲ್ಕಂಡ ಸಹಕಾರ ಸಂಘದ ಹೆಸರನ್ನು ದಿನಾಂಕ:2-3-2005ರ "ಸಂಜೆವಾಣಿ" ಕನ್ನಡ ದಿನಪತ್ರಿಕೆಯಲ್ಲಿ ಪ್ರಕಟಿಸಿ, ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಸಂಘದ ಸದಸ್ಯರಾಗಲೀ, ಸಂಘದ ಆಡಳಿತ ಮಂಡಳಿಯ ಸದಸ್ಯರಾಗಲೀ, ಸಾರ್ವಜನಿಕರಾಗಲೀ ಅಥವಾ ಹಣಕಾಸು ಸಂಸ್ಥೆಗಳಾಗಲೀ ಏನಾದರೂ ಆಕ್ಷೇಪಣೆ ಗಳಿದ್ದಲ್ಲಿ, ಪತ್ರಿಕಾ ಪ್ರಕಟಣೆ ಹೊರಡಿಸಿದ 15 ದಿನಗಳೊಳಗಾಗಿ ಆಕ್ಷೇಪಣೆಯನ್ನು ಸಮರ್ಥಿಸುವ ದಾಖಲಾತಿ ಗಳೊಂದಿಗೆ ಸಲ್ಲಿಸುವಂತೆ ಸೂಚಿಸಲಾಗಿತ್ತು. ಆದರೆ, ಮೇಲ್ಕಂಡ ಸಹಕಾರ ಸಂಘದ ಅಸ್ಥಿತ್ವದ ಬಗ್ಗೆಯಾಗಲೀ, ಇದನ್ನು ಮುಂದುವರಿಸಿಕೊಂಡು ಹೋಗುವ ಅವಶ್ಯಕತೆಯ ಬಗ್ಗೆಯಾಗಲೀ ಸಂಘದ ಆಡಳಿತ ಮಂಡಳಿಯ ಸದಸ್ಯರಿಂದಾಗಲೀ, ಸಂಘದ ಸದಸ್ಯರಿಂದಾಗಲೀ ಅಥವಾ ಸಾರ್ವಜನಿಕ ರಿಂದಾಗಲೀ, ಈವರೆಗೆ ಯಾವುದೇ ಅರ್ಜಿ ಸ್ವೀಕೃತವಾಗಿರುವುದಿಲ್ಲ.

ಆದರೂ ಮೇಲ್ಕಂಡ ಸಹಕಾರ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಮೊದಲು ಸ್ವಾಭಾವಿಕ ನ್ಯಾಯ ತತ್ವಗಳನ್ವಯ ಸಂಬಂಧಪಟ್ಟವರಿಗೆ ಅವರ ಅಹವಾಲು ಏನಾದರೂ ಇದ್ದಲ್ಲಿ ಸಲ್ಲಿಸಲು ಮತ್ತೊಂದು ಅವಕಾಶ ನೀಡುವುದು ಸೂಕ್ತವೆಂದು ತೀರ್ಮಾನಿಸಿ ಮೇಲ್ಕಂಡ ಸಹಕಾರ ಸಂಘದ ಅಧ್ಯಕ್ಷರು/ ಕಾರ್ಯದರ್ಶಿಯವರಿಗೆ ಈ ಕಛೇರಿಯಿಂದ ನೀಡಲಾಗಿರುವ ಉಲ್ಲೇಖ(2) ರಲ್ಲಿ ಕಾಣಿಸಿರುವ ದಿನಾಂಕ:24-05-2006ರ ನೋಟೀಸಿನಲ್ಲಿ ಸದರೀ ಸಹಕಾರ ಸಂಘವನ್ನು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72ರನ್ವಯ ಸಮಾಪನೆಗೊಳಿಸಿ, ಸಂಘದ ನೊಂದಣಿ ಯನ್ನು ಏಕೆ ರದ್ದುಗೊಳಿಸಬಾರದು ಎಂಬ ಬಗ್ಗೆ ಅವರ ವಿವರಣೆ ಏನಾದರೂ ಇದ್ದಲ್ಲಿ ಸದರೀ ನೋಟೀಸು ತಲುಪಿದ ಏಳು (7) ದಿನಗಳೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು. ತಪ್ಪಿದಲ್ಲಿ ಸದರೀ ಸಹಕಾರ ಸಂಘವನ್ನು ಸಮಾಪನೆಗೊಳಿಸಲು ಸಂಘದ ನೊಂದಣಿಯನ್ನು ರದ್ದುಪಡಿಸಲು ಸದರಿಯವರ ಆಕ್ಷೇಪಣೆ ಏನೂ ಇಲ್ಲವೆಂದು ಪರಿಗಣಿಸಿ, ಈ ಬಗ್ಗೆ ನಿಯಮಾನುಸಾರ ಮುಂದಿನ ಸೂಕ್ತ ಕ್ರಮ ಕೈಗೊಳ್ಳಲಾಗುವುದು ಎಂದು ಸಹ ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ಸದರೀ ಸಂಘದ ಇತ್ತೀಚಿನ ಲಭ್ಯವಿರುವ ನೋಟೀಸಿಗೆ ಅಂಚೆ ನೊಂದಣಿ ಮೂಲಕ ಕಳುಹಿಸಲಾಗಿತ್ತು. ಆದರೆ ಸದರೀ ನೋಟೀಸು ಸಂಘದಿಂದ ಸ್ವೀಕೃತಗೊಳ್ಳದೆ ಅಂಚೆ ಇಲಾಖೆಯಿಂದ ಹಿಂದಿರುಗಿಸಲ್ಪಟ್ಟಿದೆ.

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮೇಲ್ಕಂಡ ಸಹಕಾರ ಸಂಘವನ್ನು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(2)ರನ್ವಯ ಸಮಾಪನೆಗೊಳಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡುವುದು ಮಾತ್ರವಲ್ಲದೆ, ಸಂಘದ ನೊಂದಣಿಯನ್ನು ರದ್ದುಪಡಿಸುವುದು ಸೂಕ್ತವೆಂದು ತೀರ್ಮಾನಿಸಿದೆ.

ಅದರಂತೆ ಈ ಕೆಳಕಂಡ ಆದೇಶ.

**ಆದೇಶ**

1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(2)ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ:ಸಿಎಂಡಬ್ಲ್ಯೂ/69/ಸಿಎಲ್‌ಎಂ/2001 ದಿನಾಂಕ:21-11-2001ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಟಿ.ವಿ.ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ಮೈಸೂರು ಎಲೆಕ್ಟ್ರೋ ಕೆಮಿಕಲ್ಸ್ ಇಂಜಿನಿಯರಿಂಗ್ ಸಹಕಾರ ಸಂಘ ನಿ., ಇಂಡಸ್ಟ್ರಿಯಲ್ ಟೌನ್, ಬೆಂಗಳೂರು, ಈ ಸಹಕಾರ ಸಂಘವನ್ನು ಕೂಡಲೇ ಜಾರಿಗೆ ಬರುವಂತೆ ಸಮಾಪನೆಗೊಳಿಸಿ ಈ ಮೂಲಕ ಆದೇಶಿಸಿರುತ್ತೇನೆ. ಹಾಗೂ ಸಹಕಾರ ಸಂಘಗಳ ಕಾಯಿದೆಯ ಕಲಂ 73 ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು ಇವರನ್ನು ಸದರಿ ಸಂಘದ ಸಮಾಪನಾಧಿಕಾರಿಯನ್ನಾಗಿ ಹೆಚ್ಚುವರಿ ಪ್ರಭಾರದಲ್ಲಿ ನೇಮಕ ಮಾಡಿ ಈ ಮೂಲಕ ಆದೇಶಿಸಿರುತ್ತೇನೆ. ಸಮಾಪನಾಧಿಕಾರಿಯವರು ಮೇಲ್ಕಂಡ ಸಹಕಾರ ಸಂಘದ ಪ್ರಭಾರವನ್ನು ಕೂಡಲೇ ವಹಿಸಿಕೊಂಡು, ಸಂಘದ ಸಮಾಪನಾ ಕಾರ್ಯವನ್ನು ತೀವ್ರಗತಿಯಲ್ಲಿ ಮುಗಿಸಿ, ಸಂಘದ ನೊಂದಣಿಯನ್ನು ರದ್ದುಪಡಿಸಲು ಆದಷ್ಟು ಬೇಗ ಪ್ರಸ್ತಾವೆಯನ್ನು ಈ ಕಛೇರಿಗೆ ಸಲ್ಲಿಸುವಂತೆ ಈ ಮೂಲಕ ಆದೇಶಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 5.7.2006 ರಂದು ನೀಡಿರುತ್ತೇನೆ.

**ಟಿ.ವಿ. ನರಸಿಂಹಮೂರ್ತಿ**

ಪಿ.ಆರ್. 1077 ಸಹಕಾರ ಸಂಘಗಳ ಉಪನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ.

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ

**ಪ್ರ.ಸಂ. ಸಕಾಅದಾ:ಕಾನಪ:DVG:ಸಿಆರ್-64/06, ದಿನಾಂಕ: 17ನೇ ಜೂನ್ 2006**

**ಅರ್ಜಿದಾರರು:**

1) ಶ್ರೀಮತಿ ರತ್ನಮ್ಮ
2) ಲಕ್ಷ್ಮಿ
ಇಬ್ಬರ ವಾಸ: ಪಲ್ಲಾಗಟ್ಟೆ ಗ್ರಾಮ, ಜಗಳೂರು ತಾಲ್ಲೂಕು, ದಾವಣಗೆರೆ ಜಿಲ್ಲೆ.

**ಪ್ರತಿವಾದಿಗಳು**

1) ಶ್ರೀ ಬಸವರಾಜ್ ಎಂ.ಎನ್, ಬಿನ್ ಹನುಮಂತಪ್ಪ, ಟ್ರ್ಯಾಕ್ಟರ್ ಮಾಲೀಕರು, ನಂ. ಕೆಎ-17/ಬಿ-1802-1803, ವಾಸ: ಪಲ್ಲಾಗಟ್ಟೆ ಗ್ರಾಮ, ಜಗಳೂರು ತಾಲ್ಲೂಕು, ದಾವಣಗೆರೆ ಜಿಲ್ಲೆ.
2) ದಿ ಬ್ರಾಂಚ್ ಮ್ಯಾನೇಜರ್, ದಿ ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂ. ಲಿ., ಮಲ್ಲಿಕಾರ್ಜುನ ಕಾಂಪ್ಲೆಕ್ಸ್, ಪ್ರವಾಸಿ ಮಂದಿರ ರಸ್ತೆ, ದಾವಣಗೆರೆ.

**ಪ್ರಕಟಣೆ**

ರತ್ನಮ್ಮ ಮತ್ತು ಲಕ್ಷ್ಮಿ ಇವರು ಮೃತ ಶಂಕರಪ್ಪ ಇವರ ತಾಯಿ ಮತ್ತು ತಂಗಿ ಎಂದು ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಶಂಕರಪ್ಪ ರವರು ಒಂದನೇ ಪ್ರತಿವಾದಿಗಳಾದ ಶ್ರೀ ಬಸವರಾಜ್ ಎಂ.ಎನ್. ಇವರ ಟ್ರ್ಯಾಕ್ಟರ್ ನಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಲ್ಯಾಣರಾವ್ ಬಿ. ಗೌಡೆ**

ಪಿ.ಆರ್. 1083 ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಬಳ್ಳಾರಿ ವಿಭಾಗ, ದಾವಣಗೆರೆ.

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ

**ಪ್ರ.ಸಂ. ಸಕಾಅದಾ:ಕಾನಪ:DVG:ಸಿಆರ್-66/06, ದಿನಾಂಕ: 31ನೇ ಜುಲೈ 2006**

**ಅರ್ಜಿದಾರರು:**

1) ಶ್ರೀಮತಿ ಶಮೀಮ್ ಉನ್ನೀಸಾ ಕೋಂ ದಿ ಸೈಯದ್ ಸಾದತ್‌ವುಲ್ಲಾ, 27 ವರ್ಷ,
2) ಸೈಯದ್ ಮುಬಾರಕ್ ಬಿನ್ ದಿ ಸೈಯದ್ ಸಾದತ್‌ವುಲ್ಲಾ, 7 ವರ್ಷ
3) ಫರಹತ್ ಅಂಜುಮ್ ಬಿನ್ ದಿ ಸೈಯದ್ ಸಾದತ್‌ವುಲ್ಲಾ, 5 ವರ್ಷ
4) ಸಮೀದಭಾನು ಬಿನ್ ದಿ ಸೈಯದ್ ಸಾದತ್‌ವುಲ್ಲಾ, 2 ವರ್ಷ
5) ಸೈಯದ್ ವಾಹಬ್‌ಸಾಬ್ ಬಿನ್ ಲೇಟ್ ಸೈಯದ್ ಅಬ್ದುಲ್ ಜಲೀಲ್‌ಸಾಬ್, 70 ವರ್ಷ
6) ಸೈಯದ್ ಮುಸ್ತಾಕ್ ಬಿನ್ ಲೇಟ್ ಸೈಯದ್ ಸಾದತ್‌ವುಲ್ಲಾ 4 ವರ್ಷ
7) ಸುಫೀಯಬೀ 60 ವರ್ಷ

**ಪ್ರತಿವಾದಿಗಳು**

1) ಹೆಚ್.ಜಿ. ಜೀನಾಚಂದ್ರ ಬಿನ್ ಹೆಚ್.ಜಿ. ಪಾಶ್ವನಾಥ್ ಟೆಂಪೋ ಟ್ರಾಕ್ಸ್ ಮಾಲೀಕರು, ನಂ. ಕೆಎ 17 ಎಂ 2977, ಬಿಳಜೋಡಿ, ಜಗಳೂರು.
2) ವಿಭಾಗಿಯ ಪ್ರಬಂಧಕರು, ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂ. ಲಿ., ದಾವಣಗೆರೆ.

**ಪ್ರಕಟಣೆ**

ಶಮೀಮ್‌ಉನ್ನೀಸಾ, ಸೈಯದ್ ಮುಬಾರಕ್, ಫರಹತ್ ಅಂಜುಮ್, ಸಮೀರ್‌ಬಾನು, ಸೈಯದ್ ಮುಸ್ತಾಕ್, ಸೈಯದ್ ವಹಾಬ್‌ಸಾಬ್, ಸುಫೀಯಾಬೀ ಇವರ ಹೆಂಡತಿ, ಮಕ್ಕಳು ಮತ್ತು ತಂದೆ, ತಾಯಿ ಎಂದು ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸೈಯದ್ ಸಾದತ್‌ವುಲ್ಲಾ ರವರು ಒಂದನೇ ಪ್ರತಿವಾದಿಗಳಾದ ಹೆಚ್.ಜಿ. ಜೀನಾಚಂದ್ರ ಬಿನ್ ಹೆಚ್.ಜಿ. ಪಾಶ್ವನಾಥ್ ಇವರ ಟೆಂಪೋಟ್ರಾಕ್ಸ್ ನಲ್ಲಿ ಚಾಲಕನಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಲ್ಯಾಣರಾವ್ ಬಿ. ಗೌಡೆ**

ಪಿ.ಆರ್. 1084 ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಬಳ್ಳಾರಿ ವಿಭಾಗ, ದಾವಣಗೆರೆ.

